
ರಕ್ಷಿಸಿ!
ಕಾಪಾಡಿ!
...ಹೈಜಾಕ್...
ಹೌದು
ಕಳ್ಳರು ಅವಸರವಸರವಾಗಿ ಓಡುತ್ತಿದ್ದಾರೆ
ರ್‌ರ್‌ಮ್ಮ್......
ಮೊಲ ಅಟ್ಟಿಸಿ ಕೊಂಡು
ಹೋಗುತ್ತಿದೆ


ಕಳ್ಳರು ಗುಪ್ತ ಜಾಗದಲ್ಲಿ
ಅವಿತು ಕೊಂಡಿದ್ದಾರೆ
ಮೊಲ ರಕ್ಷಣಾಪಡೆಯನ್ನು
ಕಳುಹಿಸುತ್ತದೆ...


ಕಳ್ಳರು ತಮ್ಮ ಕೊಳ್ಳೆ ಸಾಮಾನಿನ
ಬಗ್ಗೆ ಆನಂದಿಸುತ್ತಿರುವಾಗ ಮೊಲ
ಮತ್ತು ಸ್ನೇಹಿತರು ಹತ್ತಿರ ಬರುತ್ತಾರೆ...
"ನಿಮ್ಮನ್ನು ಸುತ್ತುವರಿದಿದ್ದೇವೆ.
ನೀವು ಶರಣಾಗತರಾಗಲು ಕೇವಲ
3 ನಿಮಿಷಗಳಿವೆ.


ನ್ಯೂಟ್ರಿನ್..
ಅಬ್ಬಾ ಅದರ ಚಪಲ
ಎಷ್ಟೊಂದು ಪ್ರಬಲ!

# ಚಂದಮಾಮ ಕ್ಯಾಮಲ್

## ಬಣ್ಣಹಾಕುವ ಸ್ಪರ್ಧೆ

ಪ್ರವೇಶಧನವಿಲ್ಲ





**ಬಹುಮಾನ ಗಳಿಸಿರಿ.**

- ಕ್ಯಾಮಲ್—ಪ್ರಥಮ ಬಹುಮಾನ ರೂ. 15
- ಕ್ಯಾಮಲ್—ದ್ವಿತೀಯ ಬಹುಮಾನ ರೂ. 10
- ಕ್ಯಾಮಲ್—ತೃತೀಯ ಬಹುಮಾನ ರೂ. 5
- ಕ್ಯಾಮಲ್—5 ಪ್ರೋತ್ಸಾಹಕ ಬಹುಮಾನಗಳು
- ಕ್ಯಾಮಲ್—10 ಸರ್ಟಿಫಿಕೇಟ್‌ಗಳು

ಚುಕ್ಕೆ ಗೆರೆಯ ಉದ್ದಕ್ಕೂ ಕತ್ತರಿಸಿರಿ.

ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ

P.B. No. 9928, COLABA, Bombay-400 005.

ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

Name.............................. Age ....................

Address..................................................

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

ದಯವಿಟು ಚಿತ್ರವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.

ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು: *31-5-1980*

vision

**CONTEST NO.14**



# ಚಂದಮಾಮ

ಮೇ 1980



ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೧-೫೦

ವಾರ್ಷಿಕ ಚಂದಾ ರೂ. ೧೮.೦೦




# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಪ್ರಪಂಚದಲ್ಲಿ ಹೊಂದಿಕೊಂಡು ವ್ಯವಹರಿಸಲು ಎಲ್ಲರಿಗೂ ಏನೋ ಒಂದು ಶಕ್ತಿಯ ಸಹಾಯವು ಅಗತ್ಯವಾಗಿ ಇರಬೇಕಾಗುತ್ತದೆ. ಕೆಲವು ದುಷ್ಟಶಕ್ತಿಗಳೆಂದೂ ಮತ್ತೆ ಕೆಲವು ಒಳ್ಳೆಯ ಶಕ್ತಿಗಳೆಂದೂ ಪ್ರಾಪಂಚಿಕರು ತಪ್ಪಾಗಿ ತಿಳಿದುಕೊಳ್ಳುತ್ತಾರೆ. ನಿಜಕ್ಕೂ ಆ ಶಕ್ತಿಗಳಲ್ಲಿ ಯಾವ ಭೇದವೂ ಇಲ್ಲ; ಒಳಿತೂ ಅವೇ, ಕೆಡುಕೂ ಅವೇ. ಅವಕ್ಕೆ ಬರುವ ಒಳಿತು ಕೆಡುಕು ಹೆಸರು ಅವನ್ನು ಉಪಯೋಗಿಸುವವನಿಂದಲೇ. ಒಳ್ಳೆಯವನಲ್ಲಿದ್ದ ಶಕ್ತಿ ಒಳ್ಳೇಶಕ್ತಿ; ದುಷ್ಟನ ಕೈಯ ಶಕ್ತಿ ದುಷ್ಟ ಶಕ್ತಿ. ಇದು ಈ ಸಂಚಿಕೆಯ ಬೇತಾಳ ಕಥೆಯಿಂದ ಗೊತ್ತಾಗುತ್ತದೆ.

## ಅಮರವಾಣಿ

ಇದಮೇವ ಹಿ ಪಾಂಡಿತ್ಯಂ ಇಯಮೇವ ವಿದಗ್ಧತಾ
ಅಯಮೇವ ಪರೋಧರ್ಮಃ ಯತ್ ಆಯಾನ್ ಅಧಿಕೋ ವ್ಯಯಃ॥

ಆದಾಯಕ್ಕಿಂತ ಹೆಚ್ಚು ಖರ್ಚು ಮಾಡದಿರುವುದೇ ಪಾಂಡಿತ್ಯ. ಜಾಣತನ. ಮುಖ್ಯ ಕರ್ತವ್ಯ ಕೂಡಾ.

ಸಂಪುಟ: ೬೪ ಮೇ '೮೦ ಸಂಚಿಕೆ: ೫

ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦




**ಶ್ರೀಕಂಠಂ ಮಾಧವರಾವ್, ಅಲ್ಲೀಪುರಂ**

ಪ್ರ: ಸಿಡಿಲು ಬೀಳುವುದು ಯಾವುದರಿಂದ ? ಆದರ ಆಕಾರ ಹೇಗಿರುತ್ತೆ? ಪರಿಮಾಣ ಎಂತಹುದು? ಇವುಗಳನ್ನು ಕುರಿತು ಸ್ವಲ್ಪ ವಿವರವಾಗಿ ತಿಳಿಸುವಿರಾ?

ಉ: "ಸಿಡಿಲು" ಎಂಬುದರ ಬಗ್ಗೆ ಎಲ್ಲಾ ದೇಶಗಳಲ್ಲಿಯೂ ಊಹಾಪೋಹಗಳಿವೆ. ಇಂದ್ರನು ವಜ್ರಾಯುಧದಿಂದ ಮೇಘಗಳನ್ನು ಹೊಡೆಯುವನೆಂದೂ, ಅದು ಭೂಮಿಗೆ ಬಿದ್ದು ವಿಧ್ವಂಸಮಾಡುವುದೆಂದೂ ನಮ್ಮವರು ನಂಬುವರು. ಸಿಡಿಲಿಗೂ ಮಿಂಚಿಗೂ ಗುಡುಗಿಗೂ ಏನೋ ಸಂಬಂಧವಿದೆಯೆಂದು ಪ್ರಜೆಗಳ ನಂಬುಗೆ. ಗುಡುಗು ಕೇಳಿಸುವಾಗ ಸಿಡಿಲು ನಮ್ಮ ಮೇಲೆ ಬೀಳದಂತೆ ಅರ್ಜುನನ ಹೆಸರುಗಳಿರುವ ಶ್ಲೋಕಗಳನ್ನು ಕೆಲವರು ಹೇಳಿಕೊಳ್ಳುತ್ತಾರೆ. ಅರ್ಜುನನು ಇಂದ್ರನ ಮಗನಾದುದರಿಂದ, ಅವನು ಇಂದ್ರನಿಂದ ಬರುವ ಸಿಡಿಲಿನ ಪೆಟ್ಟಿನಿಂದ ನಮ್ಮನ್ನು ಕಾಪಾಡಬಲ್ಲನೆಂಬುದಕ್ಕೆ ಒಂದು ಕಟ್ಟು ಕಥೆಯನ್ನೂ ಹೇಳುತ್ತಾರೆ. ಪಾಂಡವರು ಏಕಚಕ್ರಪುರದಲ್ಲಿ ಬ್ರಾಹ್ಮಣಬಾಲಕರೆಂದು ಹೇಳಿಕೊಂಡು ಭಿಕ್ಷಾಟನೆ ಮಾಡುವಾಗ ಒಂದು ಸಿಡಿಲು ಬಿತ್ತಂತೆ. ಅರ್ಜುನನು ಅದನ್ನು ತನ್ನ ಜೋಳಿಗೆಯಲ್ಲಿಟ್ಟುಕೊಂಡು ಯಾರಿಗೂ ಅಪಾಯವಾಗದಂತೆ ಮಾಡಿದನಂತೆ.

ಈ ದಿನಗಳಲ್ಲಿ ತಿಳಿದುಬಂದುದೇನಂದರೆ, ಮಿಂಚುಗುಡುಗುಗಳಿಗೆ ಸಂಬಂಧಿಸಿದ, "ಸಿಡಿಲು" ಎಂಬ ಪದಾರ್ಥವು ಏನೂ ಇಲ್ಲ ಎಂಬುದೇ. ಮೇಘಗಳ ನಡುವೆ ತಾಗಿ ಮಿಂಚು ಏರ್ಪಡುವಾಗ ಅದು ಹಾನಿ ಮಾಡದು. ಮಿಂಚು ಎಂಬುದು ಶಕ್ತಿ ತುಂಬಿದ ವಿದ್ಯುತ್ಪ್ರಸಾರ. ಅದು ಭೂಮಿಗೂ ಮೇಘಕ್ಕೂ ನಡುವೆ ನಡೆದರೆ ತುಂಬಾ ನಷ್ಟ, ಪ್ರಾಣ ನಷ್ಟಗಳೂ ನಡೆಯುತ್ತವೆ. ಈ ವಿದ್ಯುತ್ಪಾತವು ಅಪಾಯವಿಲ್ಲದಿರಲು ಎತ್ತರವಾದ ಭವನಗಳ ಮೇಲೆ "ಲೈಟ್ನಿಂಗ್ ಕಂಡೆಕ್ಟರ್ಸ್" (ವಿದ್ಯುದ್ವಾಹಕಗಳು) ಏರ್ಪಡಿಸುತ್ತಾರೆ. ಸಾಧಾರಣವಾಗಿ ವಿದ್ಯುದ್ಘಾತವು ಎತ್ತರವಾದ ಮನೆಯ ಮೇಲೂ, ಮರಗಳ ಮೇಲೂ ಆಗುತ್ತದೆ.

ಹಾಗಾದರೆ ಅರ್ಜುನನ ಜೋಳಿಗೆ ಸೇರಿದ ಸಿಡಿಲು ಬರಿಯ ಕಲ್ಪನೆಯೋ? ಹಾಗಲ್ಲ. ರಾತ್ರಿಯ ನಿರ್ಮಲಾಕಾಶದಲ್ಲಿ ಉದುರುವ ನಕ್ಷತ್ರಗಳೆಂದು ನಮಗೆ ಕಾಣುವ ಪ್ರಕಾಶ ಪತನಗಳು ಗಾಳಿಯಲ್ಲಿ ಬೂದಿಯಾಗಿ ಹೋಗುವ ಉಲ್ಕೆಗಳು. ಆದರೆ ಅವುಗಳಲ್ಲಿ ಕೆಲವು ದೊಡ್ಡವಾಗಿದ್ದು ಗಾಳಿಯ ಒತ್ತಡಕ್ಕೆ ಪೂರ್ತಿ ದಹನವಾಗದೆ ನೆಲದ ಮೇಲೆ ಬಿದ್ದುಬಿಡುತ್ತವೆ. ಇವುಗಳಲ್ಲಿ ಹೆಚ್ಚಾಗಿ ಕಬ್ಬಿಣವೂ ಕರಿಯೂ ಇರುತ್ತದೆ. ಇವುಗಳ ಪ್ರಮಾಣವು ಕೆಲವು ಗ್ರಾಮುಗಳಿಂದ ಕೆಲವು ಟನ್ನುಗಳ ವರೆಗೂ ಇರಬಹುದು.

ಪ್ರಪಂಚದಲ್ಲಿ ಅಲ್ಲಿ ಇಲ್ಲಿ "ಕ್ರೇಟರ್" ಸರೋವರಗಳಿವೆ. ಅವು ಅನೇಕ ಟನ್ನುಗಳಷ್ಟು ಭಾರವಾದ ಉಲ್ಕೆಗಳ ಪತನ ದಿಂದ ಏರ್ಪಟ್ಟಂಥ ತಗ್ಗುಗಳಾಗಿವೆ.

ಆಕಸ್ಮಿಕ ದುರ್ವಾರ್ತೆಗಳನ್ನು ಇಂಗ್ಲೀಷಿನಲ್ಲಿ "ಬೋಲ್ಟ್ ಫ್ರಮ್ ದಿ ಬ್ಲೂ" (ನಿರ್ಮಲಾಕಾಶದಿಂದ ಸಿಡಿಲು) ಎನ್ನುತ್ತಾರೆ. ಆ ಸಿಡಿಲೇ ಉಲ್ಕೆ! ಅರ್ಜುನನು ಜೋಳಿಗೆಗೆ ಸೇರಿಸಿಕೊಂಡದ್ದೂ ಅದನ್ನೇ!




## ೮೨

ಇನ್ನು ಹೆಚ್ಚುಹೊತ್ತು ಅಲ್ಲಿರಲು ಸಾಧ್ಯವಾಗದೆ ಅತಿಲೋಭಿ ಅತ್ಯಂತ ಲೋಭಿಯನ್ನು ನೋಡಿ, "ನಿರ್ಭಾಗ್ಯನಾದ ನನ್ನ ಮಿತ್ರಾ, ನಿನ್ನ ಸ್ಥಿತಿಯನ್ನು ನೋಡಿ ನನಗೆ ತಲೆ ತಿರುಗತೊಡಗಿದೆ. ವಿಧಿಯ ಅನುಕೂಲತೆಯುಂಟಾದಾಗ ಅರ್ಹರಲ್ಲದವರು ಕೂಡ ಲಾಭಹೊಂದುವ ಮಾತು ನಿಜವೇ ಆದರೂ, ನಿನಗೆ ಅಂತಹ ಅನುಕೂಲತೆಯಾವುದೂ ಕಾಣುವುದಿಲ್ಲವಲ್ಲ? ಮನುಷ್ಯನು ವಿಧಿಯನ್ನು ನಂಬಿಕೊಂಡು ಹೆಚ್ಚಿನ ದುರಾಶೆಗೆ ಒಳಗಾಗಿ ಬಿಟ್ಟರೆ ವಿಧಿ ಕೋಪಿಸಿ ವಕ್ರಿಸಿ ಬಿಡುವುದೂ ಉಂಟು. ಆಗ ನಿನಗೆ ಬಂದಹಾಗೆ ತೀರಲಾಗದಂತಹ ದುಃಖವೇ ಪ್ರಾಪ್ತವಾಗಬಹುದು. ನಿನ್ನನ್ನು ನೋಡಿ ನಾನು ಮನಸ್ಫೂರ್ತಿಯಾಗಿ ಕರಗಿ ಹೋಗುತ್ತಿದ್ದೇನೆ. ಆದರೆ ಏನೂ ಮಾಡಲಾಗದಿದ್ದೇನೆ. ಇನ್ನು ನಾನು ಇಲ್ಲಿ ಇದ್ದೂ ಪ್ರಯೋಜನವಿಲ್ಲ. ನನ್ನ ಸಹನೆಯೂ ತೀರಿಹೋಯಿತು. ಆದುದರಿಂದ ನನಗೆ ಅಪ್ಪಣೆ ಕೊಡಪ್ಪ" ಎಂದನು.

ಅದಕ್ಕೆ ಅತ್ಯಂತ ಲೋಭಿ, "ಮಿತ್ರಾ, ದುರ್ದಶೆ ಬಂದು ಹೊಡೆದಾಗ ಧನವೂ ಮಿತ್ರರೂ ಸಹಾಯಕ್ಕೆ ಬರುವರೆಂದು ಹೇಳುತ್ತಾರೆ. ಮತ್ತೆ ನನ್ನ ಪರಮ ಮಿತ್ರನಾದ ನೀನು ಈ ಸ್ಥಿತಿಯಲ್ಲಿ ನನ್ನನ್ನು ಬಿಟ್ಟು ಹೋಗುವೆನೆನ್ನುವೆಯಲ್ಲಾ? ಆಪತ್ತಿನಲ್ಲಿರುವ ಸ್ನೇಹಿತನನ್ನು ನಿರ್ದಯಿಯಾಗಿ ಬಿಟ್ಟು ಹೋಗುವ ಸ್ನೇಹಿತನನ್ನು ಕೃತಘ್ನನೆಂದೂ ನರಕಕ್ಕೆ ಹೋಗುವನೆಂದೂ ಹೇಳುತ್ತಾರೆ. ಗೊತ್ತಿದೆಯಷ್ಟೆ?" ಎಂದನು.

"ಅದು ಮಿತ್ರನ ಕಷ್ಟವನ್ನು ತೀರಿಸುವ ಸ್ಥಿತಿಯಲ್ಲಿರುವವನ ವಿಷಯದಲ್ಲಿ ವರ್ತಿಸುವ ಮಾತು. ನಿನ್ನ ಕಷ್ಟವನ್ನು ಮಾನವರಾರಿಂದಲೂ ತೀರಿಸಲು ಸಾಧ್ಯವಿಲ್ಲ. ನಿನಗೆ ಮುಕ್ತಿ ಬರಿಸುವ ಶಕ್ತಿ ನನಗೆ ಮಾತ್ರವಲ್ಲ ಮತ್ತೆಂಥವರಿಗೂ ಇಲ್ಲ. ನಾನು ನಿನ್ನ ಹತ್ತಿರವೇ ಇರುವುದರಿಂದ ನಿನಗೆ ಒಂದು ಕೂದಲಿನ ಉಪಕಾರವೂ ಆಗದು. ನಿನ್ನ ಬಾಧೆಯನ್ನು ನೋಡುತ್ತಾ ನನಗೂ ಇಂತಹ ದುಸ್ಥಿತಿಯೇ ಬರುವುದೇನೋ ಎಂಬ ಭಯವೂ ಉಂಟಾಗುತ್ತದೆ. ಆದುದರಿಂದ ದಯಮಾಡಿ ನಾನು ಹೊರಟು ಹೋಗಲಿಕ್ಕೆ ಅನುಮತಿ ಕೊಟ್ಟುಬಿಡಪ್ಪಾ. ಸಾಯುವವನು ತನ್ನೊಂದಿಗೆ ಇನ್ನೊಬ್ಬನನ್ನೂ ಕರೆಯುವುದು



ಹುಲಿ ದಾರಿಯಲ್ಲಿ ಹೋಗುವವರನ್ನು ನೋಡಿ, "ಓ ಪಾಂಥರೇ! ಸ್ವಲ್ಪ ನಿಲ್ಲಿ! ಈ ಕಂಕಣವನ್ನು ಬಹುಮಾನವಾಗಿ ಪಡೆದುಕೊಳ್ಳಿರಿ!" ಎಂದು ಕರೆದು ಹೇಳ ತೊಡಗಿತು.

ಹುಲಿಯ ಮಾತನ್ನು ಯಾರೂ ಕಿವಿಯ ಮೇಲೆ ಹಾಕಿಕೊಳ್ಳದೆ ಅವರ ಪಾಡಿಗೆ ಹೋಗಿಬಿಡುತ್ತಿದ್ದರು.

ಕಡೆಗೆ ಒಬ್ಬ ದುರಾಶೆ ಹಿಡಿದ ಬ್ರಾಹ್ಮಣನು ಹುಲಿಯ ಮಾತು ಕೇಳಿ ತನ್ನ ಮನಸ್ಸಿನಲ್ಲಿ, "ಇದೊಂದು ನನ್ನ ಅದೃಷ್ಟ! ಆದರೆ ಈ ಅದೃಷ್ಟವನ್ನು ಪಡೆಯುವುದರಲ್ಲಿ ಸ್ವಲ್ಪ ಆಪಾಯವೂ ಕಾಣುತ್ತದೆ. ಆದುದರಿಂದ ತುಂಬಾ ಜಾಗರೂಕತೆಯೂ ಬೇಕು! ನಮಗೆ ಬೇಕಾದ ವಸ್ತುವಾದರೂ ಸಿಗಲಾರದಂಥ ಜಾಗದಲ್ಲಿ ಸಿಗುವಾಗ ಸ್ವಲ್ಪ ಅಪಾಯವಿದ್ದೇ ಇರುತ್ತೆ. ವಿಷದೊಂದಿಗೆ ಕೂಡಿದ ಅಮೃತ ಕೂಡಾ ಪ್ರಾಣ ತೆಗೆಯದೆ ಬಿಡುತ್ತದೆಯೆ? ಹಾಗೆ ನೋಡಿದರೆ ಅಷ್ಟೋ ಇಷ್ಟೋ ಅಪಾಯವಿಲ್ಲದೆ ಧನವು ಹೇಗೆ ಬರುತ್ತದೆ? ಸ್ವಲ್ಪಮಟ್ಟಿಗೆ ಸಾಹಸ ಮಾಡದೆ ಧನಿಕನಾಗಲು ಸಾಧ್ಯವೇ ಇಲ್ಲ. ನೋಡೋಣ, ಈ ಬಹುಮಾನದ ಅಗಲ ಆಳಗಳನ್ನೆಲ್ಲ ವಿಚಾರಿಸಿ ನೋಡುತ್ತೇನೆ" ಎಂದುಕೊಂಡು ಅವನು ಮೆಲ್ಲನೆ ಹುಲಿಯ ಬಳಿಗೆ ಹೋಗಿ ತುಸು ದೂರವೇ ನಿಂತು, "ಬಳೆ ನೋಡೋಣ" ಎಂದನು.

ಹುಲಿ ತನ್ನ ಪಂಜಾವನ್ನು ಮುಂದೆ ಚಾಚಿ ಸುವರ್ಣ ಕಂಕಣವನ್ನು ಅವನಿಗೆ ತೋರಿಸುತ್ತ, "ಇಕೋ ನೋಡು" ಎಂದಿತು. ಆದರೂ ಬ್ರಾಹ್ಮಣನು "ನಿನ್ನಂಥ ಕ್ರೂರ ಪ್ರಾಣಿಯನ್ನು ನಾನು ಹೇಗೆ ನಂಬಲಿ?" ಎಂದು ದೂರ ನಿಂತೇ ಕೇಳಿದನು.

"ಅಯ್ಯಾ, ನನ್ನ ಕಥೆಯನ್ನು ಕೇಳಿದರೆ ನಿನಗೆ ತನ್ನಂತಾವೇ ನಂಬುಗೆ ಬರುತ್ತದೆ. ನಾನು ಎಷ್ಟು ಮಂದಿ ಮನುಷ್ಯರನ್ನೂ, ಪಶುಗಳನ್ನೂ ಕೊಂದೆನೆಂಬುದರ ಲೆಕ್ಕವೇ ಇಲ್ಲ. ಆ ಪಾಪದ ಫಲವಾಗಿ

ಎಲ್ಲಿಯಾದರೂ ಉಂಟೆ? ಅದು ಅವನ ಪಾಪದ ಭಾರವನ್ನೇ ಹೆಚ್ಚಿಸುತ್ತದಪ್ಪಾ" ಎಂದ ಅತಿಲೋಭಿ.

"ಸರಿ ಮಿತ್ರಾ. ನಿನ್ನ ಮೇಲೆ ನನಗೇನೂ ಬೇಸರವಿಲ್ಲ. ನೀನು ಹೋಗಿ ಸುಖವಾಗಿರು. ನನ್ನ ಪ್ರಾರಬ್ಧವನ್ನು ಕುರಿತು ನನ್ನ ಮನೆಯವರಿಗೂ ಹೇಳು." ಎಂದನು ಅತ್ಯಂತ ಲೋಭಿ.

ಅತಿಲೋಭಿ ಆ ಪರ್ವತ ಪ್ರಾಂತವನ್ನು ಬಿಟ್ಟು ಮತ್ತೆ ಮಾನವ ಪ್ರಪಂಚದೊಳಗೆ ಸೇರಿಹೋದನು.

### ಬೇರೊಂದು ಮುದಿ ಹುಲಿಯ ಕಥೆ

ದಕ್ಷಿಣದೇಶದ ಅರಣ್ಯದೊಳಗೆ ಒಂದು ಮುದಿ ಹುಲಿ ವಾಸವಾಗಿತ್ತು. ಒಂದುದಿನ ಅದು ಒಂದು ಮಡುವಿನಲ್ಲಿ ಸ್ನಾನಮಾಡಿ, ಒಂದು ಕೈಯಲ್ಲಿ ದರ್ಭೆಗಳನ್ನೂ, ಎರಡನೇ ಕೈಯಲ್ಲಿ ಒಂದು ಸುವರ್ಣದ ಕಂಕಣವನ್ನೂ ಹಿಡಿದುಕೊಂಡು ಆ ಮಡುವಿನ ಇನ್ನೊಂದು ಬದಿಯಲ್ಲಿ ಕುಳಿತುಕೊಂಡಿತ್ತು. ಅದರ ಹತ್ತಿರವೇ ಪ್ರಯಾಣಿಕರು ಹೋಗುವ ದಾರಿಯಿದ್ದಿತು.

ನನ್ನ ಹೆಂಡತಿ ಮಕ್ಕಳು ಎಲ್ಲರೂ ಸತ್ತು ನಾನೊಬ್ಬ ಉಳಿದಿದ್ದೇನೆ. ಚಿಂತೆಯಿಂದಿರುವ ನನ್ನ ಮುಂದೆ ಒಬ್ಬ ದೊಡ್ಡ ಸಾಧು ಬಂದು, ದಾನಧರ್ಮ ಮಾಡುತ್ತಾ ಇದ್ದರೆ ಪಾಪಗಳು ನಾಶವಾಗಿ ಪುಣ್ಯದ ಬಲ ಬರುತ್ತದೆಂದು ಬೋಧನೆ ಮಾಡಿದ. ಆ ಪ್ರಕಾರವೇ ನಾನೀಗ ದಿನಾ ಸ್ನಾನಮಾಡಿ ನನ್ನ ಹತ್ತಿರ ಸೇರಿದ್ದ ಧನವನ್ನು ದಾನಮಾಡುವ ವ್ರತ ಹಿಡಿದಿದ್ದೇನೆ. ಮನುಷ್ಯರನ್ನು ಕೊಲ್ಲುವಾಗ ಅವರ ಹತ್ತಿರವಿದ್ದ ಧನ ವನ್ನೆಲ್ಲಾ ಒಂದು ಕಡೆ ಬಚ್ಚಿಟ್ಟಿದ್ದೇನೆ. ಅದೀಗ ಉಪ ಯೋಗವಾಯಿತು. ಈಗ ನನಗೆ ವೃದ್ಧಾಪ್ಯ ಬಂದಿದೆ. ಕೋರೆ ಹಲ್ಲುಗಳೂ ಉಗುರುಗಳೂ ಶಕ್ತಿ ಕಳೆದು ಕೊಂಡಿವೆ. ಹೀಗಿರುವಾಗ ನನ್ನನ್ನು ನೀನು ಅನು ಮಾನಿಸುವುದಕ್ಕೆ ಕಾರಣವೇ ಇಲ್ಲವಲ್ಲ? ನಾನು ಆ ಸಾಧುವಿನಿಂದ ವೇದಶಾಸ್ತ್ರಗಳ ಜ್ಞಾನ ಕೂಡಾ ಸಂಪಾದಿಸಿದ್ದೇನೆ. ಯಜ್ಞ, ವೇದಾಧ್ಯಯನ, ದಾನ, ತಪಸ್ಸು, ಸತ್ಯವ್ರತ, ಕ್ಷಮೆ, ತಾಳ್ಮೆ, ನಿರ್ಲೋಭತ್ವ ಎಂಬ ಎಂಟು ಮಾರ್ಗಗಳು ಪುಣ್ಯನಿಧಿಗೆ ತಲುಪಿ ಸುತ್ತವೆಂದು ಪುರಾಣಗಳು ಹೇಳುತ್ತವೆ. ಇವುಗಳಲ್ಲಿ ಮೊದಲನೆಯ ನಾಲ್ಕು ಆಡಂಬರವೆನಿಸಬಹುದು. ಆದರೆ ಕಡೆಯ ನಾಲ್ಕೂ ಮಹಾತ್ಮರಿಂದ ಮಾತ್ರವೇ ಸಾಧ್ಯವಾಗುವಂತಹುದು. ನಾನು ನಿಃಸ್ವಾರ್ಥಿಯಾದು ದರಿಂದಲೇ ಕೇಳಿದವರಿಗೆ ಈ ಸುವರ್ಣ ಕಂಕಣವನ್ನು ಕೊಡಲು ಸಿದ್ಧನಾಗಿದ್ದೇನೆ. ಆದರೆ ಹುಲಿಯಾಯಿ ತಲ್ಲಾ, ಸಂದರ್ಭ ಸಿಕ್ಕಿದರೆ ಮನುಷ್ಯನನ್ನು ತಿನ್ನದೆ ಬಿಡುವುದೇ ಎಂದು ನಿನಗೆ ತೋರಿದರೆ ತಪ್ಪೆನ್ನಲಾರೆ. ನನ್ನಂಥವನ ಈ ಅಪವಾದ ಒಮ್ಮೆಗೇ ಹೋಗು ವಂಥದಲ್ಲ. ಧರ್ಮಶಾಸ್ತ್ರಗಳು ಹೇಳುವುದೇನೆಂದರೆ, ಬಡವನಿಗೆ ಕೊಟ್ಟ ದಾನವು ಮರಳುಗಾಡಿನಲ್ಲಿ ಮಳೆ ಸುರಿದ ಹಾಗೆ; ಹಸಿದವನಿಗೆ ಸಿಕ್ಕಿದ ಆಹಾರದ ಹಾಗೆ. ಎಲ್ಲರಿಗೂ ಪ್ರಾಣವೆಂದರೆ ಸಿಹಿಯೇ. ಸಜ್ಜನರು ಎಲ್ಲರನ್ನೂ ತಮ್ಮ ಹಾಗೆಯೇ ನೋಡಿಕೊಳ್ಳುತ್ತಾರೆ. ಯಾವುದನ್ನು ವಿಸರ್ಜಿಸಬೇಕು, ಯಾವುದನ್ನು ಸ್ವೀಕರಿಸಬೇಕು. ಯಾವುದು ಒಳ್ಳೆಯದು, ಯಾವುದು ಕೆಟ್ಟದು ಎಂಬ ಸಂಗತಿ ಮನುಷ್ಯರಿಗೆ ತಮ್ಮ ಅನುಭವ



ದಿಂದಲೇ ತಿಳಿದು ಬರುತ್ತದೆ. ನೀನಂತೂ ತುಂಬಾ ಬಡವನು. ನಾನು ನಿನಗೆ ಬೆಲೆಬಾಳುವ ಈ ಕಂಕಣವನ್ನು ಕೊಡುತ್ತೇನೆ. ಧನವನ್ನು ನಿರ್ಧನರಿಗೆ ಕೊಡಬೇಕಲ್ಲದೆ, ಧನವಂತರಿಗೆ ಕೊಡಲೇ ಬಾರದು. ಔಷಧವನ್ನು ರೋಗಿಗೆ ಕೊಡಬೇಕಲ್ಲದೆ ಆರೋಗ್ಯವಂತರಿಗೆ ಕೊಡಬಾರದಲ್ಲವೆ? ಅದರಲ್ಲೂ ಪ್ರತಿಫಲಾಪೇಕ್ಷೆ ಇಲ್ಲದೆ ಮಾಡುವ ದಾನವು ಉತ್ತಮೋತ್ತಮವೆಂದು ಮಹರ್ಷಿಗಳು ಹೇಳುತ್ತಾರೆ. ಆದುದರಿಂದ ಇಲ್ಲದ ಸಂದೇಹಗಳನ್ನು ಬಿಟ್ಟು, ಮಡುವಿಗಿಳಿದು ಸ್ನಾನ ಮಾಡಿ ಬಾ. ಈ ಸುವರ್ಣ ದಾನ ಪಡೆದು ನನ್ನನ್ನು ಉದ್ಧರಿಸು."

ಆ ದಾರಿಹೋಕನು ಹುಲಿಯ ಮಾತನ್ನು ನಂಬಿ, ಕಂಕಣವನ್ನು ತೆಗೆದುಕೊಳ್ಳಬೇಕೆಂಬ ದುರಾಶೆಯಲ್ಲಿ ಸ್ನಾನಮಾಡಲು ಮಡುವಿಗಿಳಿದನು. ಇಳಿದ ಮರುಕ್ಷಣದಲ್ಲಿ ಕಾಲುಗಳು ಸೊಂಟದವರೆಗೂ ಕೆಸರಿನಲ್ಲಿ ಹೂತುಹೋದುವು. ಕಿರುಚುವುದರ ಹೊರತು ಕದಲಲು ಅವನಿಗಾಗಲಿಲ್ಲ.

ಅವನು ಕೆಸರಿನಲ್ಲಿ ಹುಗಿದು ಹೋಗುವುದನ್ನು ನೋಡಿ ಹುಲಿ, "ಅಯ್ಯೋ! ಕೆಸರಿನಲ್ಲಿ ಸಿಕ್ಕಿಕೊಂಡೆಯಾ? ಹೆದರಬೇಡ. ನಾನು ನಿನ್ನನ್ನು ಮೇಲಕ್ಕೆ ಎಳೆಯುತ್ತೇನೆ." ಎಂದು ತೀರಕ್ಕೆ ಬಂದು ಅವನ ಕೈ ಹಿಡಿದು ಎಳೆಯಿತು.

ಹುಲಿ ಅವನನ್ನು ಕೆಡವಿ ಹಾಕುವಾಗ ಅವನು ಅಳುಗೊರಲಿನಿಂದ, "ಅಯ್ಯೋ! ಧರ್ಮಶಾಸ್ತ್ರಗಳನ್ನೂ, ವೇದಗಳನ್ನೂ ಓದಿಕೊಂಡ ಮಾತ್ರಕ್ಕೆ ದುಷ್ಟನನ್ನು ನಂಬಲೇಬಾರದು. ಯಾವ ಮೇವು ಮೇದರೂ ಹಸುವಿನ ಹಾಲು ಸಿಹಿಯಾಗಿಯೇ ಇರುವ ಹಾಗೆ, ಕ್ರಿಯೆಗೆ ಅಂತಃ ಸ್ವಭಾವವೇ ಗಣನೆಗೆ ಬರುತ್ತದೆ. ಇಂದ್ರಿಯಗಳೂ ಬುದ್ಧಿಯೂ ಸ್ವಾಧೀನದಲ್ಲಿಲ್ಲದವನ ಕೃತಿಗಳು ಆನೆಯ ಸ್ನಾನದಂತೆ ಯಾವ ಉಪಯೋಗಕ್ಕೂ ಬಾರವು. ಆಚರಣೆಯಲ್ಲಿ ತೋರಿಸದ ಶುಷ್ಕೋಪದೇಶವೆಂಬುದು, ಅನಾಕಾರಿಯಾದವಳು ಧರಿಸಿಕೊಂಡ ಆಭರಣಗಳ ಹಾಗೆ, ಸುಮ್ಮನೆ ಭಾರ ಅಷ್ಟೇ! ಈ ಘಾತುಕ ಮೃಗವನ್ನು ನಂಬಿ ಮೋಸ ಹೋದೆನಲ್ಲಾ! ನದಿಗಳನ್ನೂ, ಆಯುಧಧಾರಿಗಳನ್ನೂ, ಕೊಂಬು ಉಗುರುಗಳಿರುವ ಪ್ರಾಣಿಯನ್ನೂ, ರಾಜರನ್ನೂ ನಂಬಲೇ ಬಾರದು. ಅವರಿಂದ ಕೊನೆಗೆ ಗೊತ್ತಾಗುವುದು ಅವರ ಅಂತಃ ಸ್ವಭಾವವೇ! ಆಕಾಶದಲ್ಲಿ ಸಂಚರಿಸುತ್ತ ಅಂಧಕಾರವನ್ನೂ ಪಾಪಗಳನ್ನೂ ತೊಲಗಿಸುತ್ತ, ನಕ್ಷತ್ರಗಳ ಮಧ್ಯದಲ್ಲಿ ತಿರುಗುವ ಚಂದ್ರನನ್ನು ಸಹಾ ವಿಧಿವಶದಿಂದ ರಾಹು ನುಂಗುತ್ತಾನೆ. ಹಣೇ ಬರಹ ತಪ್ಪಿಸಲು ಯಾರಿಂದ ಸಾಧ್ಯ?" ಎಂದು ಹೇಳಿಕೊಳ್ಳುತ್ತಾ ಪ್ರಾಣಬಿಟ್ಟು, ಹುಲಿಯ ಹೊಟ್ಟೆಗೆ ಆಹುತಿಯಾದನು.





# ಕರಡಿಕೆಂಗಣ್ಣ

೨೨

[ಸಾಮಂತ ಸೂರ್ಯಭೂಪತಿ ತನ್ನ ಕೋಟೆಯನ್ನು ರಕ್ಷಿಸಲು ಹೋದನು. ಮಾಯಾಮರ್ಕಟನೂ ಅವನ ಬೆಂಬತ್ತಿ ಓಡಿದನು. ತನ್ನ ಗುರು ಕಷ್ಟದಲ್ಲಿ ಸಿಕ್ಕಿಬಿದ್ದಿರುವನೆಂದು ತಿಳಿದು ಕರಡಿಕೆಂಗಣ್ಣ ಮಾಂತ್ರಿಕನು ಸುರಂಗದೊಳಗೆ ಪ್ರವೇಶಿಸುವಾಗ, ಕಟುಕಕರಡಿಯವನು ಅವನನ್ನು ತಡೆದನು. ಅವನ ಅಪೇಕ್ಷೆಯಂತೆ ಅವನ ತಲೆಯ ಮೇಲೆ ಮಂತ್ರದುಂಡವನ್ನಿಟ್ಟು ತಾಡಿಸಿ ಸುರಂಗದೊಳಗಿಳಿದನು ಕರಡಿಕೆಂಗಣ್ಣ.]

ಕರಡಿ ಕೆಂಗಣ್ಣ ಮಾಂತ್ರಿಕನು ಕಟುಕರ ನಾಯಕನ ಕರಡಿ ಮುಖವನ್ನು ಮಾಯಮಾಡಿ ಹೋದುದನ್ನು ನೋಡಿ ಎಲ್ಲರೂ ಸ್ವಲ್ಪ ಹೊತ್ತು ಮೂಕ ವಿಸ್ಮಿತರಾದರು. ಕಟುಕರ ನಾಯಕನಿಗೆ ದೊಡ್ಡ ಭಾರ ಇಳಿದಹಾಗೆ ಸಂತೋಷವಾಯಿತು. ಅವನಿಗೆ ತನ್ನ ನಿಜವಾದ ಮುಖವನ್ನು ಎಷ್ಟುಸಾರಿ ತಡವಿಕೊಂಡರೂ ತೃಪ್ತಿಯಿಲ್ಲ.

ಜಿತಕೇತು ರಾಜನು ಕಾಳೀವರ್ಮನನ್ನು ನೋಡಿ "ಕಾಳೀವರ್ಮ, ಈಗ ನಾವು ಏನು ಮಾಡ ಬೇಕೆಂದು ನಿನ್ನ ಅಭಿಪ್ರಾಯ? ನಾನಂತೂ ಎಲ್ಲರ ಸಮಕ್ಷಮದಲ್ಲಿ ನಮ್ಮ ಸಾಮಂತ ಸೂರ್ಯ ಭೂಪತಿಯ ಕುಮಾರಿ ನನ್ನ ದತ್ತಪುತ್ರಿಯೆಂದು ಹೇಳಿದ್ದೇನೆ. ಅವಳನ್ನು ಆ ಮರ್ಕಟನ ಗುರುವಾದ ಮಿಥ್ಯಾ ಮಿಶ್ರನಿಂದ ಕಾಪಾಡ ಬೇಕಾದುದೇ ಈಗ ಪ್ರಥಮ ಕರ್ತವ್ಯ, ಹೌದಾ? ನಮ್ಮ ಸೈನಿಕರನ್ನೆಲ್ಲಾ ಕರೆದು ಕೊಂಡು ಆ ಕಡೆಗೆ ಹೋಗೋಣವೇ?" ಎಂದು ಕೇಳಿದನು.

"ಹೋಗೋಣ. ಆದರೆ ಸೈನಿಕರೊಂದಿಗೆ ಕೋಲಾಹಲವಾಗಿ ಹೋದರೆ ಆ ಧೂರ್ತ ತಾಂತ್ರಿಕನಿಗೆ ನಮ್ಮ ಸುಳಿವು ಮುಂದಾಗಿಯೇ ತಿಳಿದು



ಹೊಗುತ್ತದೆ. ಅವನು ತನ್ನ ತಂತ್ರದ ಎಚ್ಚರಿಕೆಯನ್ನು ವಹಿಸಿ ಕೊಳ್ಳುತ್ತಾನೆ. ಆದುದರಿಂದ ನಾವು ಶಬ್ದವಿಲ್ಲದೆ ಜಾಗರೂಕತೆಯಿಂದ ಹೋಗಬೇಕು." ಎಂದು ಹೇಳಿ ಕಾಳೀವರ್ಮನು ಅಲ್ಲಿಂದ ಕದಲಿದನು.

ಕಾಳೀವರ್ಮನನ್ನು ಅನುಸರಿಸಿ ಉಗ್ರದಂಡ ರಾಕ್ಷಸನೂ, ಕಟುಕ ನಾಯಕನೂ ಹೊರಟರು. ಅದುವರೆಗೆ ಎಲ್ಲವನ್ನೂ ನೋಡುತ್ತಾ ಸುಮ್ಮನಿದ್ದ ಬೈರಾಗಿ ಗುರುವೂ, ಅವನ ಶಿಷ್ಯನೂ, ಸುರಂಗ ಮಾರ್ಗವನ್ನು ಜಿತಕೇತು ರಾಜನಿಗೆ ತೋರಿಸುತ್ತ, "ಮಹಾರಾಜರೆ, ನಾವು ಈ ಸುರಂಗ ಮಾರ್ಗದಲ್ಲಿ ಹೋಗಿ, ಕೆರೆಯ ತೀರದಲ್ಲಿ ಆಲದ ಮರದ ಹತ್ತಿರವಿರುವ ಇದರ ಮುಖದ್ವಾರವನ್ನು ಕಾವಲು ಕಾಯುತ್ತಾ ಇರುತ್ತೇವೆ. ಅಪ್ಪಣೆ!" ಎಂದು ಹೇಳಿ ಸುರಂಗದೊಳಗೆ ಇಳಿದು ಹೋದರು. ಅವರಿಗೆ ಅಲ್ಲಿಂದ ಪಾರಾಗಿ ಹೋದರೆ ಸಾಕೆನಿಸಿತ್ತು! ಕಾಳೀವರ್ಮನೂ, ಕಟುಕ ನಾಯಕನೂ, ಉಗ್ರದಂಡ ರಾಕ್ಷಸನೂ ಅರಣ್ಯದೊಳಗೇ ಕಾಲು ನಡಿಗೆಯಿಂದ ಸಾಗುತ್ತಿದ್ದರು. ಆಗ ಅವರು ದೊಡ್ಡದೊಂದು ಕರಡಿಯನ್ನು ನೋಡಿದರು. ಅದು ಕೆಲವು ಗಡ್ಡೆ ಗೆಣಸುಗಳನ್ನೂ, ಹಣ್ಣುಗಳನ್ನೂ ಕಾಡು ಬೀಳುಗಳಿಂದ ಕಟ್ಟಿ ಹೆಗಲ ಮೇಲಿಟ್ಟುಕೊಂಡು ಎಲ್ಲಿಗೋ ಹೋಗುತ್ತಿತ್ತು.

ಕಾಳೀವರ್ಮನು ನಿಂತು ಆಶ್ಚರ್ಯದಿಂದ ಆ ಕರಡಿಯನ್ನು ಉಗ್ರದಂಡನಿಗೆ ತೋರಿಸುತ್ತ "ಏನಿದು? ಕರಡಿ ಮನುಷ್ಯರಿಗೆ ಬೇಕಾದ ಹೊರೆಯೊಂದಿಗೆ ಹೋಗುತ್ತಿದೆಯಲ್ಲ! ಎಂಥ ವಿಚಿತ್ರ! ಯಾರ ಹತ್ತಿರವೋ ಒಳ್ಳೇ ಪಳಗಿದೆ!" ಎಂದನು.

"ಇದರಲ್ಲಿ ಆಶ್ಚರ್ಯಕ್ಕೇನಿದೆ? ಈ ಕರಡಿ ದುಷ್ಟನಾದ ತಾಂತ್ರಿಕ ಮಿಥ್ಯಾಮಿಶ್ರನ ಸಾಕು ಕರಡಿಯಾಗಿರುತ್ತೆ. ನಾವು ಜಾಗರೂಕತೆಯಿಂದ ಸದ್ದಿಲ್ಲದೆ ಅದನ್ನು ಅನಸರಿಸಿ ಹೋಗೋಣ. ನಿಜ ಗೊತ್ತಾಗುತ್ತೆ" ಎಂದನು ರಾಕ್ಷಸ ಪಿಸುದನಿಯಿಂದ.

ಮೂವರೂ ಕರಡಿಯನ್ನು ಅನುಸರಿಸಿ ಹೋದರು. ಸ್ವಲ್ಪ ದೂರ ಹೋಗುವಷ್ಟರಲ್ಲಿ ಕರಡಿಕೆಂಗಣ್ಣ ಮಾಂತ್ರಿಕನೂ, ಬಿಳೀಗಡ್ಡದಿಂದ, ಸೊರಕಲು ಶರೀರದಿಂದ, ರುದ್ರಾಕ್ಷಿ ಮಾಲೆಗಳನ್ನು ಧರಿಸಿಕೊಂಡಿದ್ದ ಒಬ್ಬ ವೃದ್ಧನೂ ಒಟ್ಟಿಗೆ ಕುಳಿತು ಏನೋ ಮಾತಾಡಿಕೊಂಡಿರುವುದನ್ನು ನೋಡಿದರು. ಕೆಂಗಣ್ಣ ಮಾಂತ್ರಿಕನು ವೃದ್ಧನ ಮುಂದೆ ತುಂಬಾ ವಿನಯ ವಿಧೇಯತೆಯಿಂದ ಮಾತಾಡುತ್ತಿದ್ದನು. ಅವರ ಮಾತಿನಲ್ಲಿ ಸಾಮಂತ ಸೂರ್ಯ ಭೂಪತಿಯೂ ಸೇರಿಕೊಂಡಿದ್ದನು.

ಕಾಳೀವರ್ಮನನ್ನು ನೋಡಿದ ಕೂಡಲೇ ಕೆಂಗಣ್ಣ ಮಾಂತ್ರಿಕನು ತಟಕ್ಕನೆ ಎದ್ದುನಿಂತು ಉತ್ಸಾಹದಿಂದ, "ಶಿಷ್ಯಾ ಕಾಳೀ! ಇಕೋ ನನ್ನ ಗುರುಗಳು ಇಲ್ಲೇ ಇದ್ದಾರೆ! ಇವರೇ ಮಹಾಪ್ರಭಾವಶಾಲಿಗಳಾದ ಭಲ್ಲೂಕಪಾದ ಮಹಾ ಗುರುಗಳು!" ಎಂದು ಕೂಗಿ

ಹೇಳಿದನು ಸಂತೋಷದಿಂದ. ಕಾಳೀವರ್ಮನು ಬೇಗ ಬೇಗನೇ ಮುಂದೆ ಹೋಗಿ, "ಹಾಗಾದರೆ ನಿಮ್ಮ ಭಾರ ತುಂಬಾ ಕಡಿಮೆಯಾದ ಹಾಗಾಯಿತು. ನಿಮ್ಮ ಗುರುಗಳು ಕ್ಷೇಮವಾಗಿ ನಿಮ್ಮೊಂದಿಗೆ ಇದ್ದಾರೆ." ಎಂದನು.

"ಹೌದು. ಈಗ ಸೂರ್ಯಭೂಪತಿ ಹೇಳುವ ಮಾತುಗಳು ನಿಮಗೇ ಸಂಬಂಧಿಸಿದಂಥಾದ್ದು. ಇವನ ಕುಮಾರಿ ಕಾಂಚನಲತೆಯನ್ನು ತಾಂತ್ರಿಕ ಮಿಥ್ಯಾ ಮಿಶ್ರನು ಕೋಟೆಯೊಳಗನಿಂದ ಅಪಹರಿಸಿಯಾಯಿತು. ಎತ್ತಹೋದನೋ ಏನಾದನೋ? ಈಗ ನೀನೇನು ಮಾಡುವಿಯೋ ?" ಎಂದನು ಕೆಂಗಣ್ಣ ಮಾಂತ್ರಿಕ.

ಅದುವರೆಗೆ ಕರಡಿಯನ್ನು ಹೊಡೆದು ಕೊಲ್ಲುವ ಎತ್ತುಗಡೆಯಲ್ಲಿದ್ದ ಕಟುಕ ನಾಯಕನು ತನ್ನ ಚಪ ಗೊಡಲಿಯನ್ನು ಭುಜದ ಮೇಲಕ್ಕೆಳಿಸಿ, "ಹಾಗಾದರೆ ಈ ಕರಡಿ ಭಲ್ಲೂಕ ಪಾದರ ಸೇವೆಯದೆಂದಾಯಿತು. ಪುಣ್ಯಕಾಲ! ಬದುಕಿಕೊಂಡಿತು!" ಎಂದು ಹೇಳಿ ಕೊಂಡನು.

"ಓಹೋ! ನಮ್ಮ ಗುರುಗಳ ಸಾಕು ಕರಡಿಯೇ ನಿಮ್ಮನ್ನು ಇಲ್ಲಿಗೆ ಕರೆತಂದಿತೆ? ಒಳಿತೇ ಆಯಿತು. ಆ ದುಷ್ಟ ತಾಂತ್ರಿಕ ಮಿಥ್ಯಾಮಿಶ್ರನು ನನ್ನ ಗುರುಗಳನ್ನು ಭಲ್ಲೂಕೇಶ್ವರೀ ಆಲಯದ ಮುಂದೆ ಒಂದು ಮರಕ್ಕೆ ಕಟ್ಟಿ ಆಹಾರವೇನೂ ಕೊಡದೆ ಕೊಲ್ಲಲು ಹಂಚಿಕೆ ಹಾಕಿದ್ದನು. ಆ ತಾಂತ್ರಿಕನು ಈ ಕಡೆಗೆ ಬಂದಮೇಲೆ ಸ್ವಾಮಿಭಕ್ತಿ ತುಂಬಿದ ಈ ಕರಡಿ ಇವರ ಕಟ್ಟುಗಳನ್ನು ಬಿಚ್ಚಿ ಕಾಪಾಡಿತು. ಈ ಕರಡಿಯ ಜತೆಯಲ್ಲಿಯೇ ಪ್ರಯಾಣ ಮಾಡಿ ಇಲ್ಲಿಯ ವರೆಗೆ ಬಂದಿದ್ದಾರೆ." ಎಂದ ಕೆಂಗಣ್ಣ.

ಉಗ್ರದಂಡ ರಾಕ್ಷಸನು ಮುದಿ ಭಲ್ಲೂಕ ಪಾದ ನನ್ನು ಕೋಪದಿಂದ ದುರುಗುಟ್ಟಿ ನೋಡುತ್ತ, "ನನ್ನ ಅಣ್ಣಾ ಕಾಲದುಂಡ ಎಲ್ಲಿದ್ದಾನೆ?" ಎಂದು ಗದರಿಸಿ ಕೇಳಿದನು.



ಭಲ್ಲೂಕ ಪಾದನು ತನ್ನ ಎದೆಯ ಮೇಲಿರುವ ರುದ್ರಾಕ್ಷಿ ಮಾಲೆಗಳನ್ನು ನೋಡಿ ಮುಗುಳು ನಗುತ್ತ. "ಈ ಪ್ರಶ್ನೆ ಕೇಳಬೇಕಾದ್ದು ನನ್ನ ಹತ್ತಿರವಲ್ಲ. ಆ ಮಿಥ್ಯಾಮಿಶ್ರನ ಹತ್ತಿರ. ಅವನು ಮದ್ದು ಮಾಯೆ ಗಳಿಂದ ನಿನ್ನ ಅಣ್ಣನನ್ನು ಮೂಕಮಾಡಿ, ನಾನು ಈ ಕರಡಿಯನ್ನು ವಾಹನವಾಗಿ ಉಪಯೋಗಿಸಿ ಕೊಳ್ಳುವ ಹಾಗೆಯೇ, ಅವನು ನಿನ್ನಣ್ಣನ ಹೆಗಲ ಮೇಲೇರಿ ಪ್ರಯಾಣ ಮಾಡುತ್ತಾನೆ. ಅವನು ಈ ಅರಣ್ಯದಲ್ಲೇ ಎಲ್ಲೋ ಇರುತ್ತಾನೆ. ಅವನನ್ನು ಕಂಡುಹಿಡಿದು ಬಿಟ್ಟರೆ, ನಿನ್ನ ಅಣ್ಣನೂ ರಾಜಕುಮಾರಿ ಕಾಂಚನಲತೆಯೂ ಸಿಗುತ್ತಾರೆ. ನಿಮ್ಮಲ್ಲಿ ಅವನನ್ನು ಕಂಡುಹಿಡಿಯಬಲ್ಲ ಸಮರ್ಥ ಸಾಹಸಿ ಯಾರೋ?" ಎಂದು ಎಲ್ಲರನ್ನೂ ಒಮ್ಮೆ ನೋಡಿದನು.

ಕಾಳೀವರ್ಮನು ಕತ್ತಿಯ ಹಿಡಿಯಮೇಲೆ ಕೈಹಾಕಿ, "ಆ ಸಾಹಸವನ್ನು ನಾನೇ ಮಾಡಿ ಕಾಂಚನಲತೆಯನ್ನು ರಕ್ಷಿಸುವುದು ಮಾತ್ರವಲ್ಲ, ಆ ತಾಂತ್ರಿಕನನ್ನೂ,



ಮಂತ್ರಗಳ ಮಹಾಗುರುವಾದ ನಿಮ್ಮನ್ನೂ ಸಹ ನನ್ನ ಕತ್ತಿಗೆ ಬಲಿಹಾಕಿ ಬಿಡುತ್ತೇನೆ. ಮಾನವರ ಕಾರ್ಯಗಳನ್ನು ಮೀರಿಸುವಂಥ ಮಂತ್ರತಂತ್ರ ಕಲಿತವರಾರೂ ಪ್ರಪಂಚದಲ್ಲಿರಬಾರದು. ಅಂಥವರಿಂದ ಕೇಡೇ ಬರುತ್ತೆ." ಎಂದನು.

ಆ ಮಾತುಕೇಳಿ ಕರಡಿಕೆಂಗಣ್ಣ ಮಾಂತ್ರಿಕನಿಗೆ ಮಹಾಕೋಪ ಬಂದು, ಹಲ್ಲು ಕಡಿಯುತ್ತ ಮಂತ್ರ ದಂಡವನ್ನು ಮೇಲೆತ್ತಿ "ಏನೆಂದೆಯೋ ಸೊಕ್ಕಿನ ಶಿಷ್ಯಾ!" ಎಂದು ಗರ್ಜಿಸಿದನು.

ಕೂಡಲೇ ಸೂರ್ಯಭೂಪತಿ ಅವನನ್ನು ತಡೆದು, "ಕಾಳೀವರ್ಮಾ, ಈ ಭಲ್ಲೂಕ ಪಾದರೂ ಅವರ ಶಿಷ್ಯ ಕೆಂಗಣ್ಣ ಮಾಂತ್ರಿಕರೂ ನಮ್ಮ ಶತ್ರುಗಳಲ್ಲ, ಇವರ ಮೇಲೆ ನಿರರ್ಥಕವಾಗಿ ಕೋಪಿಸುವುದು ನ್ಯಾಯವಲ್ಲ. ಶಂಖ ಧ್ವನಿ ಎಬ್ಬಿಸುತ್ತಾ ಮಾಯಾ ಮರ್ಕಟನ ಗುರುವಾದ ತಾಂತ್ರಿಕ ಮಿಥ್ಯಾಮಿಶ್ರನ ಬಳಿಗೆಬರುವಂತೆ ಸೂಚನೆ ಕೊಟ್ಟ ಅವರ ಸೇವಕನನ್ನು ಹಿಡಿಯಲು ನನಗೆತುಂಬಾ ಸಹಾಯ ಮಾಡಿದವರು ಇವರೇ. ಇಕೋ ನೋಡು ಆ ಶಂಖ. ಅವನ ಕೈಯಿಂದ ನಾನು ಈ ಶಂಖವನ್ನು ಕಿತ್ತುಕೊಂಡು, ಎಷ್ಟು ಹಿಂಸೆ ಪಡಿಸಿ ಕೇಳಿದರೂ ಆ ದುಷ್ಟನಿರುವ ಸ್ಥಳವನ್ನು ಹೇಳಲಿಲ್ಲ, ಅಂತಲೇ ಆ ದುಷ್ಟ ಸೇವಕನನ್ನು ನನ್ನ ಕತ್ತಿಗೆ ಬಲಿಕೊಟ್ಟು ಬಿಟ್ಟೆ" ಎಂದನು.

ಕಾಳೀವರ್ಮನು ಆ ಶಂಖವನ್ನು ದೂರ ಬಿಸುಟು, "ಸೂರ್ಯಭೂಪತೀ! ನೀನು ಆ ಸೇವಕನನ್ನು ಕೊಲ್ಲ ಬೇಕಾಗಿದ್ದಿಲ್ಲ. ನೀನು ಕೊಲ್ಲ ಬೇಕಾದ್ದು ನಿನ್ನ ಕುಮಾರಿಯನ್ನು ಅಪಹರಿಸಿಕೊಂಡು ಹೋದ ತಾಂತ್ರಿಕ ಮಿಥ್ಯಾಮಿಶ್ರನನ್ನು ಮಾತ್ರ. ಅವನ ಸೇವಕನನ್ನು ಕೊಲೆಮಾಡಿ ಪಾಪ ಕಟ್ಟಿಕೊಂಡಿರುವಿ. ಸರಿ, ಹೋಗಲಿ. ನಾವೀಗ ತಲಾ ಒಂದೊಂದು ದಿಕ್ಕಿಗೆ ಹೊರಟು ಅವನನ್ನು ಹುಡುಕೋಣ. ಸಿಕ್ಕದೆ ಎಲ್ಲಿಗೆ ಹೋಗುತ್ತಾನೆ?" ಎಂದು ಹೇಳಿ ಕೂಡಲೇ ಒಂದು ದಿಕ್ಕನ್ನು ಹಿಡಿದು ಹೊರಟು ಬಿಟ್ಟನು.

ಭಲ್ಲೂಕ ಪಾದನು ಕಾಳೀವರ್ಮನನ್ನು ಮೆಚ್ಚುವಂತೆ ನೋಡುತ್ತ ತಲೆಯಾಡಿಸಿ, ಕೆಂಗಣ್ಣ ಮಾಂತ್ರಿಕನನ್ನು ಕುರಿತು, "ಶಿಷ್ಯಾ, ನೀನು ನಮಗೆ ಅಗತ್ಯವಾಗಿದ್ದ ಹುಟ್ಟು ಗುಣವುಳ್ಳವನನ್ನೇ ಶಿಷ್ಯನಾಗಿ ಆರಿಸಿದ್ದೀ. ಆದರೆ ಪರಿಸ್ಥಿತಿ ವ್ಯತಿರೇಕಿಸಿದ್ದರಿಂದ ಕೈಜಾರಿ ಹೋದನು. ಈಗ ನಾವು ಆ ತಾಂತ್ರಿಕನನ್ನು ಹತಮಾಡುವುದರಲ್ಲಿ ತೃಪ್ತಿ ಪಡೋಣ, ಹೊರಡಿರಿ ಎಲ್ಲರೂ" ಎಂದು ಹೇಳಿ, ತನ್ನ ಕರಡಿ ವಾಹನದ ಮೇಲೆ ಏರಿದನು,

ಅವನ ಅಕ್ಕಪಕ್ಕಗಳಲ್ಲಿ ಕೆಂಗಣ್ಣನೂ, ಉಗ್ರದಂಡ ರಾಕ್ಷಸನೂ ಹೊರಟರು. ಉಗ್ರದಂಡನನ್ನು ಸೂರ್ಯಭೂಪತಿಯೊಂದಿಗೆ ಇನ್ನೊಂದು ದಿಕ್ಕಿಗೆ ಹೋಗುವಂತೆ ಹೇಳಿದನು ಭಲ್ಲೂಕಪಾದ. "ನಾನೂ

ಬರುತ್ತೇನೆ" ಎಂದು ಕಟುಕ ನಾಯಕನೂ ಸೂರ್ಯ ಭೂಪತಿಯೊಂದಿಗೆ ಹೊರಟನು.

ಕಾಳೀವರ್ಮನು ದಾರಿಯುದ್ದಕ್ಕೂ ಕಾಲಿನ ಗುರುತುಗಳಿವೆಯೇ ಎಂದು ನೆಲವನ್ನು ನೋಡುತ್ತ ನಡೆಯುತ್ತಿದ್ದನು. ಕೆಲವು ಗಂಟೆಗಳ ಹಿಂದೆ ಅರಣ್ಯ ಪ್ರಾಂತದಲ್ಲಿ ಸಾಧಾರಣ ಮಳೆಸುರಿದು ಹೋಗಿತ್ತು. ಅಂತಲೇ ಕೆಲವು ಮನುಷ್ಯರ ಹಜ್ಜೆಗುರುತುಗಳೊಂದಿಗೆ ಅದಕ್ಕಿಂತ ಮೂರು ಪಾಲು ದೊಡ್ಡದಾದ ಪಾದದ ಗುರುತುಗಳಿರುವುದನ್ನು ಕಾಳೀವರ್ಮನು ನೋಡಿದನು. ತಾಂತ್ರಿಕನ ವಶದಲ್ಲಿದ್ದ ಉಗ್ರದಂಡನ ಅಣ್ಣ ಕಾಲದಂಡ ರಾಕ್ಷಸನ ನೆನಪು ಬಂತು.

ಆ ದಿಕ್ಕಿನಲ್ಲಿ ಎಲ್ಲಿಯೋ ಮಿಥ್ಯಾಮಿಶ್ರ ತಾಂತ್ರಿಕನು ನೋಡಲು ಸಿಗುವನೆಂದು ಕಾಳೀವರ್ಮನಿಗೆ ನಂಬುಗೆಯುಂಟಾಯಿತು. ಆ ದೊಡ್ಡ ಹಜ್ಜೆಯ ಗುರುತು ನೋಡುತ್ತಾ ತಸುದೂರ ಹೋದವನಿಗೆ ದೊಡ್ಡದೊಂದು ಕೊಳವು ಕಂಡು ಬಂತು. ಆ ಕೊಳಕ್ಕೆ ಬಂದು ಬೀಳುವ ಒಂದು ನೀರೋಳಿಯನ್ನೂ ನೋಡಿದನು. ಆ ನೀರೋಳಿಯ ಬದಿಯಲ್ಲಿ ನೆಲಕ್ಕೆ ಒಂದು ತ್ರಿಶೂಲವನ್ನು ಚುಚ್ಚಿ ನಿಲ್ಲಿಸಲಾಗಿತ್ತು. ಅದನ್ನು ನೋಡಿ ಆಶ್ಚರ್ಯಪಡುತ್ತ ಕಾಳೀವರ್ಮನು ಇನ್ನಿಷ್ಟು ಮುಂದೆ ಹೋದನು. ಕೊಳದ ನೀರಿನಲ್ಲಿ ದೃಢಕಾಯನೊಬ್ಬನು ಆಕಾಶದ ಕಡೆಗೆ ಕೈ ಮುಗಿದು ಕಣ್ಣು ಮುಚ್ಚಿ ಮಂತ್ರ ಜಪಿಸುತ್ತ ನಿಂತಿದ್ದನು. ಅವನ ತಲೆಯಲ್ಲಿ ಕರ್ರಗಾದ ಗುಂಗುರುಕೂದಲುಗಳಿದ್ದುವು. ಒಂದು ಮುಷ್ಟಿಗಡ್ಡವನ್ನೂ ಬೆಳೆಸಿದ್ದನು. ಅವನೇ ತಾಂತ್ರಿಕ ಮಿಥ್ಯಾಮಿಶ್ರನೆಂದು ಕಾಳೀವರ್ಮನಿಗೆ ಗೊತ್ತಾಯಿತು. ಅವನು ಒಮ್ಮೆಗೇ ಉಕ್ಕಿದ ಕೋಪದಿಂದ ಕಣ್ಣು ಕೆಕ್ಕರಿಸಿಕೊಂಡು ವೇಗವಾಗಿ ಕೊಳದ ಬದಿಗೆ ಹೋಗಿ, "ಎಲೋ ಕಪಟ ಧ್ಯಾನದವನೇ! ತಾಂತ್ರಿಕ ಮಿಥ್ಯಾಮಿಶ್ರನೆಂದರೆ ನೀನುತಾನೆ? ನಿನ್ನಂಥವನಿಗೆ ಮಂತ್ರ ಜಪಗಳಿಂದ ಏನು



ಪ್ರಯೋಜನ? ನೀನು ಅಪಹರಿಸಿವ ಸೂರ್ಯ ಭೂಪತಿಯ ಮಗಳನ್ನು ಎಲ್ಲಿ ಬಚ್ಚಿಟ್ಟಿರುವಿ? ಬೇಗ ಹೇಳು" ಎಂದು ಗಟ್ಟಿಯಾಗಿ ಕೇಳಿದನು.

ಮಂತ್ರಜಪ ಮಾಡುವವನು ಕಣ್ಣು ತೆರೆದು, ಕಾಳೀವರ್ಮನನ್ನು ಪರೀಕ್ಷಿಸುವವನಂತೆ ನೋಡಿ, "ನನ್ನನ್ನು ಕಂಡಮಾತ್ರದಿಂದಲೇ ನಾನು ಯಾರೆಂಬುದನ್ನು ತಿಳಿದುಕೊಂಡ ನೀನು ಬುದ್ಧಿವಂತನೇಸರಿ. ನನ್ನ ಶಂಖ ಹೊರುವ ಸೇವಕನನ್ನು ಕಾಡಿನಲ್ಲಿ ಯಾರೋ ಕೊಂದರೆಂದು ನನ್ನ ಶಿಷ್ಯ ಭ್ರಾಂತಿಮತಿ ಹೇಳಿದ. ಅವನನ್ನು ಕೊಂದವನು ನೀನಲ್ಲವಷ್ಟೆ? ಹೌದಾದರೆ ಮೊದಲು ನಿಜವನ್ನು ಒಪ್ಪಿಕೊಂಡು ಆ ಮೇಲೆ ಮಾತಾಡು" ಎಂದನು.

"ಅದೆಲ್ಲಾ ಮತ್ತೆ ಹೇಳುತ್ತೇನೆ. ಕಾಂಚನಲತೆಯನ್ನು ಎಲ್ಲಿ ಅಡಗಿಸಿರುವೆಯೋ ಬೇಗ ಹೇಳಿಬಿಡು," ಎಂದು ಕಾಳೀವರ್ಮನು ಕತ್ತಿಯನ್ನು ಹಿಡಿಯಲು ಕೈಯನ್ನಿಳಿಸಿದನು. ಆಗ ಮರದಕೊಂಬೆಯಲ್ಲಿದ್ದ



ಮರ್ಕಟನು ಕೂಗಿದನು ಕೊನೆಯುಸಿರೆಳೆಯುತ್ತ. ಕಾಳೀವರ್ಮನು ಒರೆಯಿಂದ ತನ್ನ ಕತ್ತಿಯನ್ನು ಎಳೆದುಕೊಂಡು. ನಿಬ್ಬೆರಗಾಗಿ ನೋಡುತ್ತಿರುವ ತಾಂತ್ರಿಕ ಮಿಥ್ಯಾಮಿಶ್ರನನ್ನು ನೋಡುತ್ತ, "ತಾಂತ್ರಿಕಾಧಮನೇ! ನೀನು ಪೂಜಿಸುವ ಭಲ್ಲೂಕೇಶ್ವರಿಯ ಆಣೆ! ನಿನ್ನನ್ನು ಈ ಕೊಳದ ತೀರದಲ್ಲೇ ಆ ಲೋಕಕ್ಕೆ ಕಳುಹಿಸಿಬಿಡುತ್ತೇನೆ. ಮೊದಲು ಕಾಂಚನಲತೆ ಎಲ್ಲಿದ್ದಾಳೆಂದು ಹೇಳಿ ಸ್ವಲ್ಪವಾದರೂ ಪುಣ್ಯ ಕಟ್ಟಿಕೋ" ಎಂದನು.

ಆದುವರೆಗೂ ನಿಶ್ಚೇಷ್ಟನಂತಿದ್ದ ತಾಂತ್ರಿಕನು, ಮುಗುಳು ನಗುವನ್ನು ಸೂಸುತ್ತ ಕೈಗಳನ್ನು ಚಾಚಿ ಮುಷ್ಟಿಗಳನ್ನು ಮುಚ್ಚುತ್ತ ಬಿಡಿಸುತ್ತ ಬಗೆಬಗೆಯಾಗಿ ತಿರುಗಿಸುವುದನ್ನು ನೋಡಿ ಕಾಳೀವರ್ಮನಿಗೆ ವಿಚಿತ್ರವೆನಿಸಿತು. ಅವನು ನೀರಿಗಿಳಿದು ಹೋಗಿ ಅವನನ್ನು ಹೊಡೆಯ ಬೇಕೆಂದು ಅಡಿ ತೆಗೆಯುವಾಗ, ಹಿಂದಿನಿಂದ "ಯುವಕನೇ! ಜಾಗ್ರತೆ! ತಾಂತ್ರಿಕನು ಸನ್ನೆ ತೋರಿಸುವುದು ಮೂಕರಾಕ್ಷಸನಿಗೆ!" ಎಂಬ ಧ್ವನಿ ಸ್ತ್ರೀ ಕಂಠದಿಂದ ಹೊರಟು ಬಂತು.

ಕಾಳೀವರ್ಮನು ತಟ್ಟನೆ ಹಿಂದಡಿಯಿಟ್ಟು ತಿರುಗಿ ನೋಡಿದನು. ಉಗ್ರದಂಡ ರಾಕ್ಷಸನನ್ನೇ ಹೋಲುವ ರಾಕ್ಷಸನೊಬ್ಬನು, ತನ್ನ ಹೆಗಲಿನ ಮೇಲಿದ್ದ ಯುವತಿಯೊಬ್ಬಳನ್ನು ಕೆಳಕ್ಕಿಳಿಸಿ, ಕಾಡಾನೆಯಂತೆ ಒಂದುಸಾರಿ ಘೀಂಕಾರಮಾಡಿ ಕಲ್ಲಿನ ಗದೆಯನ್ನು ಎತ್ತಿಕೊಂಡು ಕಾಳೀವರ್ಮನ ಕಡೆಗೆ ಬಂದನು. ಅವನು ಸಮೀಪಿಸುವ ವರೆಗೂ ನಿಂತಿದ್ದ ಕಾಳೀವರ್ಮನು ರಾಕ್ಷಸನು ತನ್ನಮೇಲೆ ಹಾರುವಾಗ ಮಿಂಚಿನಂತೆ ಬದಿಗೆ ಸರಿದನು. ರಾಕ್ಷಸನು ಕೊಳದ ಬದಿಯ ಕೆಸರಿನಲ್ಲಿ ಕಾಲುಜಾರಿ ನೀರಿನಮೇಲೇ ಕೌಚಿ ಬೀಳುವಾಗ, ಅವನ ಕೈಯಲ್ಲಿದ್ದ ಕಲ್ಲಿನಗದೆ ತೀರದಲ್ಲಿ ಬಿದ್ದುಹೋಯಿತು. ಬಿದ್ದ ರಾಕ್ಷಸನು ಮತ್ತಷ್ಟು ದೊಡ್ಡದನಿಯಿಂದ ಗರ್ಜಿಸುತ್ತ, ಕೈಗಳನ್ನೂರಿ ಏಳ

ಮಾಯಾಮರ್ಕಟನು "ಓಹೋಯ್" ತಾಂತ್ರಿಕ ಗುರೂ! ಇವನೇ ಕಾಳೀವರ್ಮ! ಹುಟ್ಟಾಸಾಹಸಿ. ಹೆಚ್ಚುಮಾತು ಬೆಳೆಸದೆ ಈ ಕ್ಷಣದಲ್ಲೇ ಇವನ ಪ್ರಾಣ ತೆಗೆದುಬಿಡುವುದೇ ನಮಗೆ ಕ್ಷೇಮ!" ಎಂದು ಕರ್ಕಶವಾಗಿ ಕೂಗುತ್ತ ಮರದ ಕೊಂಬೆಯಿಂದ ಧುಮುಕಿದನು. ಅದೇ ಕ್ಷಣದಲ್ಲಿ ಕಾಳೀವರ್ಮನು ಕತ್ತಿ ಹಿರಿಯಲು ಕೈಯಿಳಿಸುವಾಗ, ಮೇಲಿಂದ ಏನೋ ಬೀಳುವುದೆಂಬ ಆತುರದಲ್ಲಿ ನೆಲದಲ್ಲಿ ಚುಚ್ಚಲ್ಪಟ್ಟ ಶೂಲವನ್ನು ಕಿತ್ತು ಹಾರುವ ಮರ್ಕಟನ ಕಡೆಗೆ ಎತ್ತಿ ಹಿಡಿದನು. ಮಾಯಾಮರ್ಕಟನು ಅದರ ಮೊನೆಯ ಮೇಲೆಯೇ ಹಾರಿದ್ದರಿಂದ ಶೂಲವು ಮತ್ತೆ ನೆಲಕ್ಕಿಳಿದು ಕಾಳೀವರ್ಮನ ಹಿಡಿತ ತಪ್ಪಿ ನೆಲದಲ್ಲಿ ನೆಟ್ಟುಹೋಯಿತು. ಮರ್ಕಟನ ಭಾರವು ಅದನ್ನು ಚೆನ್ನಾಗಿ ನೆಲಕ್ಕೂರಿಸಿ ಶೂಲಕ್ಕೇರಿಸಲ್ಪಟಂತಾಯಿತು ಮರ್ಕಟನ ಅವಸ್ಥೆ! "ಹಾ! ತಾಂತ್ರಿಕಗುರೂ! ಇನ್ನು ನನಗೆ ನಿಮ್ಮ ಸೇವೆ ಆ ಲೋಕದಲ್ಲಿಯೇ!" ಎಂದು

ಬೇಕೆಂದಿರುವಾಗ, ಕಾಳೀವರ್ಮನು ಅವನ ಗದೆಯನ್ನೆತ್ತಿಕೊಂಡು ಅವನ ತಲೆಗೆ ಬಲವಾಗಿ ಹೊಡೆದನು. ಆ ಪೆಟ್ಟಿಗೆ ರಾಕ್ಷಸನು ದಿಕ್ಕುಗಳು ಪ್ರತಿಧ್ವನಿಸುವಂತೆ ಕೂಗಿ ತಲೆತಿರುಗಿ ಕೊಳದ ಬದಿಯಲ್ಲಿ ಅಂಗಾತ ಬಿದ್ದುಬಿಟ್ಟನು.

ಇಷ್ಟಾದ ಮೇಲೆ ಆ ಸ್ಥಳದಿಂದ ಹೇಗಿ ಓಡುವುದೆಂದು ದಿಕ್ಕುಗಳನ್ನು ನೋಡುತ್ತಿರುವ ತಾಂತ್ರಿಕನನ್ನು ಅಡಗಣ್ಣಿನಿಂದ ನೋಡುತ್ತ, ಕಾಳೀವರ್ಮನು ತನ್ನ ಬದಿಯಲ್ಲಿದ್ದ ಯುವತಿಯನ್ನು ಕುರಿತು, "ನೀನು ತಾನೇ ಸಾಮಂತ ಸೂರ್ಯಭೂಪತಿಯ ಮಗಳು ಕಾಂಚನಲತೆ?" ಎಂದು ಕೇಳಿದನು. ಅವಳು ಹೌದೆಂಬಂತೆ ತಲೆಯಾಡಿಸಿ, "ಈ ತಾಂತ್ರಿಕಾಧಮನ ಇಬ್ಬರು ಪ್ರಚಂಡ ಸೇವಕರೂ ಸತ್ತ ಹಾಗೆ ಕಾಣುತ್ತದೆ. ನನ್ನ ಹತ್ತಿರ ಆಯುಧವಿಲ್ಲ. ನಿಮ್ಮ ಕತ್ತಿಯನ್ನು ನನಗೆ ಕೊಟ್ಟು, ಮೂಕ ರಾಕ್ಷಸನ ಗದೆಯನ್ನು ನೀವು ಎತ್ತಿಕೊಳ್ಳಿ. ನಾವಿಬ್ಬರೂ ಸೇರಿ ಈ ದುಷ್ಟನಿಗೆ ಗತಿಗಾಣಿಸಬಹುದು" ಎಂದಳು.

ಅವಳ ಮಾತು ಕೇಳಿ ಕಾಳೀವರ್ಮನು ಅತ್ಯಾನಂದಪಡುತ್ತ, ಕತ್ತಿಯನ್ನು ಅವಳಿಗೆ ಕೊಟ್ಟು, ಕಲ್ಲಿನ ಗದೆಯನ್ನು ಎತ್ತಿಕೊಂಡು ಕೊಳದ ನೀರಿಗಿಳಿದು ಮುಂದೆ ಹೋದನು. ಅಷ್ಟರಲ್ಲಿ ಜಿತಕೇತು ರಾಜನು ಇಬ್ಬರು ಸೈನಿಕರೊಂದಿಗೆ ಅಲ್ಲಿಗೆ ಬಂದು, "ಅಯ್ಯಯ್ಯೋ ಕಾಳೀವರ್ಮಾ! ಮುಂದೆ ಹೋಗಬೇಡ! ಇದು ಮೊಸಳೆ ಕೊಳ! ಆ ತಾಂತ್ರಿಕನನ್ನು ನನ್ನ ಸೈನಿಕರೂ ಕಟುಕ ನಾಯಕನೂ ನೋಡಿಕೊಳ್ಳುತ್ತಾರೆ. ಅವನು ತಪ್ಪಿಸಿಕೊಂಡು ಓಡಲು ಸಾಧ್ಯವೇ ಇಲ್ಲ. ಉಗ್ರದಂಡ ರಾಕ್ಷಸನೂ ಬಂದನು" ಎಂದು ಕೂಗುತ್ತಾ ಓಡಿ ಬಂದನು.

ರಾಜನು ಹಾಗೆಯೇ ಕಾಂಚನಲತೆಯ ಬಳಿಗೆ ಓಡಿ ಬಂದು, "ಅಮ್ಮಾ, ಕಾಂಚನಲತೇ! ನೀನು ನನ್ನ ದತ್ತ ಪುತ್ರಿ ಗೊತ್ತಾ? ಆ ಕಾರಣದಿಂದ ನನಗೆ



ಹಿಡಿಸಿದ ವರನಿಗೆ ನಿನ್ನನ್ನು ಕೊಟ್ಟು ಮದುವೆ ಮಾಡುವ ಹಕ್ಕು ನನಗಿದೆಯಮ್ಮಾ! ಮಗಳೇ! ಕ್ಷೇಮವಾಗಿರುವೆಯಲ್ಲಾ!" ಎಂದು ಅವಳ ಕೈ ಹಿಡಿದನು.

ಕಾಂಚನಲತೆ ನಾಚಿ ತಲೆ ತಗ್ಗಿಸಿದಳು. ಆಗ ಅಲ್ಲಿಗೆ ಸಾಮಂತ ಸೂರ್ಯಭೂಪತಿಯೂ, ಕರಡಿ ವಾಹನದ ಮೇಲೆ ಭಲ್ಲೂಕಪಾದ ಗುರುವೂ, ಉಗ್ರದಂಡನೂ ಬಂದು ಸೇರಿದರು.

ಸೂರ್ಯಭೂಪತಿ ಮಗಳನ್ನು ನೋಡಿ ಆನಂದ ಬಾಷ್ಪ ಸುರಿಸುತ್ತ, "ಅಮ್ಮಾ, ನಿನ್ನನ್ನು ತಿರುಗಿ ಜೀವದೊಂದಿಗೆ ನೋಡುವೆನೋ ಎಂದು ತುಂಬಾ ಹೆದರಿದ್ದೆ." ಎಂದು ಕಾಳೀವರ್ಮನನ್ನು ನೋಡಿ, "ಕಾಳೀವರ್ಮಾ! ನೀನು ಮಹಾ ವೀರ! ಸಂದೇಹವೇ ಇಲ್ಲ. ನಿನಗೆ ಸರಿಯಾದ ಜೋಡಿ ನನ್ನ ಔರಸ ಪುತ್ರಿಯೂ, ಜಿತಕೇತುರಾಜರ ದತ್ತಪುತ್ರಿಯೂ ಆದ ಇವಳೇ!" ಎಂದನು. ಆ ಮಾತನ್ನು ಕೇಳಿ ಜಿತಕೇತು

ರಾಜನು ನಗುತ್ತ, ತೀರಕ್ಕೆ ಬಂದ ಕಾಳೀ ವರ್ಮನ ಕೈಯನ್ನು ಹಿಡಿದುಕೊಂಡು, ಕಾಂಚನ ಲತೆಯ ಮುಂದೆ ನಿಲ್ಲಿಸಿ, "ನನ್ನ ದತ್ತಪುತ್ರಿಯಾದ ಕಾಂಚನಲತೆಯನ್ನು ವೀರ ಯುವಕನಾದ ಕಾಳೀ ವರ್ಮನೊಂದಿಗೆ ಪಾಣಿಗ್ರಹಣಮಾಡಿಸುತ್ತೇನೆ. ನನ್ನ ಅನಂತರ ಇವನೇ ಚಂದ್ರಶಿಲಾ ನಗರಕ್ಕೆ ರಾಜ!" ಎಂದು ಕಾಂಚನಲತೆಯ ಕೈಯನ್ನು ಕಾಳೀವರ್ಮನ ಕೈಯಲ್ಲಿಟ್ಟನು. ಎಲ್ಲರೂ ಹರ್ಷಧ್ವಾನಮಾಡು ತ್ತಿರಲು, ಕೊಳದಲ್ಲಿ ಸಾಯುವವನ ಆರ್ತನಾದವು ಕೇಳ ತೊಡಗಿತು. ನೀರು ಕದಲಿದ ಶಬ್ದ ಕೇಳಿ, ದೂರ ದಲ್ಲಿದ್ದ ದೊಡ್ಡ ದೊಂದು ಮೊಸಳೆ ಧಾವಿಸಿ ಬಂದು ತಾಂತ್ರಿಕ ಮಿಥ್ಯಾಮಿಶ್ರನನ್ನು ಹಿಡಿದಿತ್ತು. ಅದ ರೊಂದಿಗೆ ಮಿಥ್ಯಾಮಿಶ್ರನು ಗುದಮುರಿಗೆ ಹಾಕಿ ಕೊಂಡು ಆರ್ತನಾದ ಮಾಡುತ್ತಿದ್ದನು. ಅದನ್ನು ನೋಡಿ ಕರಡಿ ಕೆಂಗಣ್ಣ ಮಾಂತ್ರಿಕನು ಮಂತ್ರದಂಡ ವನ್ನು ಆಡಿಸುತ್ತ, "ಭಲ್ಲೂಕಪಾದ ಗುರುಗಳೇ! ಭಲ್ಲೂಕೇಶ್ವರೀ ದೇವಿಯ ಪೂಜಾರೀ ಸ್ಪರ್ಧೆ ತೀರಿ ಹೋಯಿತು. ಇನ್ನು ನೀವೇ ಪ್ರಧಾನ ಪೂಜಾರಿಗಳು. ನಿಮ್ಮ ಪ್ರಬಲ ವಿರೋಧಿ ಮೊಸಳೆಯ ಆಹಾರ ವಾದನು!" ಎಂದನು ಉತ್ಸಾಹದಿಂದ.

ಎಲ್ಲರೂ ನೋಡುತ್ತಿದ್ದಂತೆ ಮೊಸಳೆ ತಾಂತ್ರಿಕ ಮಿಥ್ಯಾಮಿಶ್ರನನ್ನು ಕೊಳದ ನೀರಿನೊಳಗೆ ಎಳೆದು ಕೊಂಡುಹೋಯಿತು. ಉಗ್ರದಂಡ ರಾಕ್ಷಸನು ಕೊಳದ ತೀರದಲ್ಲಿ ಅಚಲನಾಗಿ ಬಿದ್ದಿದ ತನ್ನ ಅಣ್ಣ ಕಾಲದಂಡ ರಾಕ್ಷಸನನ್ನು ಎತ್ತಿ ಕುಳ್ಳಿರಿಸಿ, "ಅಣ್ಣಾ, ಇಷ್ಟು ಕಾಲದಿಂದ ನಿನ್ನನ್ನು ಹಿಡಿದು ಹಿಂಸೆಪಡಿಸಿ ಪೀಡಿಸಿದ ಮಿಥ್ಯಾಮಿಶ್ರನು ಮೊಸಳೆಗೆ ಆಹುತಿ ಯಾದನು. ಏಳೇಳು!" ಎನ್ನುತ್ತ ಅವನ ಬೆನ್ನಿನ ಮೇಲೆ ಧುಮು ಧುಮನೆ ಗುದ್ದಿದನು.

ಕಾಲದಂಡನು ತಟಕ್ಕನೆ ಎದ್ದು ನಿಂತು ಮೈ ಮುರಿದು, ಎರಡು ಕೈಗಳಿಂದಲೂ ಗಟ್ಟಿಯಾಗಿ ತನ್ನ ಕುತ್ತಿಗೆಯನ್ನು ಹಿಡಿದುಕೊಂಡು ಕೊಳದ ನೀರಿ ನಲ್ಲಿ ಏಳುತ್ತಿರುವ ಗುಳ್ಳೆಗಳನ್ನು ನೋಡುತ್ತಾ, "ತಮ್ಮಾ, ಆ ತಾಂತ್ರಿಕನು ಸತ್ತನೇ? ಅವನು ನನ್ನ ಬಾಯಿಯೊಳಗೆ ತಿನ್ನಿಸಿದ ವಿಷಗಳಿಂದ ನಾಲಿಗೆ ಬಿದ್ದುಹೋಗಿ ಮೂಕನಾದೆ. ಅವನನ್ನು ನೋಡಿ ಹೆದರಿ ಅವನ ಸೇವಕನೂ ಆದೆ. ನನ್ನಂಥ ರಾಕ್ಷಸನ ತಲೆಗೇ ಹೊಡೆದು ವಿಷಕಾರಿಸಿ ಮೂರ್ಛೆ ಬೀಳಿಸಿದ ಆ ಧೀರ ಯುವಕ ಎಲ್ಲಿದ್ದಾನೇ?" ಎಂದು ಅತ್ತಿತ್ತ ನೋಡಿ, ಕಾಳೀವರ್ಮನಬಳಿಗೆ ನಡೆದು, "ನೀನಲ್ಲವೇ ಆ ಪುಣ್ಯವಂತ!" ಎನ್ನುತ್ತಾ ಅವನನ್ನೂ, ಕಾಂಚನಲತೆ ಯನ್ನೂ ಎತ್ತಿ ತನ್ನ ಹೆಗಲಲ್ಲಿ ಕುಳ್ಳಿರಿಸಿಕೊಂಡನು. ಎಲ್ಲರೂ ಮತ್ತೊಮ್ಮೆ ಹರ್ಷಧ್ವನಿಮಾಡಿದರು.

—(ಮುಗಿಯಿತು)






# ಅಂತರಂಗಜ್ಞಾನ

**ಕ**ಥೆಗಳ ಬಂಡವಾಳದಂತಹ ಬೇತಾಳನ ಮಂಡೆಯನ್ನು ಬರಿದು ಮಾಡದೆ ಬಿಡೆನೆಂಬ ಹಟತೊಟ್ಟವನಂತೆ ತ್ರಿವಿಕ್ರಮ ಮಹಾರಾಜನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಭುಜದ ಮೇಲೇರಿಸಿಕೊಂಡು, ಎಂದಿನಂತೆ ಮೌನ ಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಆ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ನೀನು ಯಾವುದೋ ಅದ್ಭುತ್ತ ಶಕ್ತಿಯನ್ನು ಸಾಧಿಸಲಿಕ್ಕಾಗಿ ಈ ರೀತಿಯ ಹಟ ಹಿಡಿದು ಸಾಧನೆಗೆ ಹೊರಟ ಸಾಧಕನಾಗಿದ್ದರೆ, ಅದಕ್ಕಾಗಿ ನಿನ್ನನ್ನು ಅಭಿನಂದಿಸಲೇಬೇಕು. ಏಕೆಂದರೆ ಮಾನವರನ್ನು ಸನ್ಮಾರ್ಗದಲ್ಲಿ ನಡೆಯಿಸಲು ಸಾಮ ದಾನ ಭೇದ ದಂಡಗಳೆಂಬ ಚತುರೋಪಾಯಗಳಿಗಿಂತಲೂ ಅದ್ಭುತ ಶಕ್ತಿಗಳು ಇನ್ನಿಷ್ಟು ಉಪಯೋಗ ಬೀಳುತ್ತವೆ. ಇದಕ್ಕೆ ನಿದರ್ಶನವಾಗಿ ನಿನಗೆ ಭೀಮನೆಂಬವನು ಸಾಧಿಸಿದ್ದ ಅದ್ಭುತ ಶಕ್ತಿಯನ್ನು ಕುರಿತು ಹೇಳುತ್ತೇನೆ. ದಾರಿಯ ಶ್ರಮವನ್ನು ಮರೆತು ಕಥೆ ಕೇಳುತ್ತಾ ನಡೆ." ಎಂದು ಕಥೆಯನ್ನು ಪ್ರಾರಂಭಿಸಿತು :

## ಬೇತಾಳಕಥೆಗಳು



ಕೆಲಸವನ್ನು ಬದಿಗಿರಿಸಿ, ಹೊಂಡವನ್ನು ಮುಚ್ಚಿ, ಹಾರವನ್ನು ತೆಗೆದುಕೊಂಡು ಮನೆಗೆ ಹೋಗಿ, ಮೊದಲು ತಾಳೆಯೋಲೆಯ ಗ್ರಂಥವನ್ನು ಓದಿ ನೋಡಿದನು. ಅದರಲ್ಲಿ ಆ ಹಾರವನ್ನು ಕುರಿತು ವಿವರಗಳಿದ್ದುವು.

ಯಾರು ಆ ಹಾರವನ್ನು ಕೊರಳಿನಲ್ಲಿ ಧರಿಸಿ ಕೊಳ್ಳುವರೋ ಅವರಿಗೆ ತನ್ನ ಇದಿರಿನಲ್ಲಿದ್ದವನ ಮನಸ್ಸಿನೊಳಗೆ ಏನು ಆಲೋಚನೆ ನಡೆಯುತ್ತದೆಂದು ಗೊತ್ತಾಗುತ್ತಿದ್ದಿತು. ಎಷ್ಟೋ ನೂರು ವರ್ಷಗಳ ಹಿಂದೆ ದಯಾನಿಧಿ ಎಂಬವನು ಈ ಹಾರವನ್ನು ಮಹಾಯೋಗಿಯೊಬ್ಬನಿಂದ ವರವಾಗಿ ಸಂಪಾದಿಸಿ ಕೊಂಡಿದ್ದಾನೆ. ಅದಕ್ಕಿರುವ ಶಕ್ತಿಯನ್ನು ತಿಳಿದು ಕೊಂಡ ಮೇಲೆ ದಯಾನಿಧಿ ಅದನ್ನು ಧರಿಸಿಕೊಂಡು ದುಷ್ಟಕಾರ್ಯಗಳಿಗೆ ಪ್ರಾರಂಭಿಸಿದನು. ಅವನು ಯಾವುದೋ ನೆವನ ಹಿಡಿದು ದೊಡ್ಡ ದೊಡ್ಡವರ ಬಳಿಗೆ ಹೋಗಿ, ಅವರ ಅಂತರಂಗದಲ್ಲಿ ನಡೆಯುವ ಕೆಟ್ಟ ಕೆಟ್ಟ ಆಲೋಚನೆಗಳನ್ನು ತಿಳಿದುಕೊಂಡು, ಅವು ಗಳನ್ನು ಬಹಿರಂಗ ಪಡಿಸುವೆನೆಂದು ಹೆದರಿಸುವನು. ಆಗ ಅವರು ಅವನಿಗೆ ಕೇಳಿದಷ್ಟು ಧನವನ್ನು ಕೊಟ್ಟು ಸುಮ್ಮನಾಗಿಸುವರು. ಹೀಗೆ ಅವನು ಅಪಾರವಾಗಿ ಹಣ ಸಂಪಾದಿಸಿದನು. ಅವನಿಗೆ ಅದೇ ವೃತ್ತಿಯಾಗಿ ಹೋಯಿತು. ಕಟ್ಟಕಡೆಗೆ ಅವನು ತನ್ನ ಹೆಂಡತಿಯ ಮುಂದೆ ಆ ಹಾರವನ್ನು ಧರಿಸಿ, ಅವಳಿಗೆ ತನ್ನ ಮೇಲೆ ಪ್ರೇಮವಿಲ್ಲವೆಂದು ತಿಳಿದು ಅವಳನ್ನು ಕೊಂದು ಬಿಟ್ಟನು. ಕೊಲೆಗಾರನಾಗಿ ಸಿಕ್ಕಿಬೀಳಲು ಇಷ್ಟವಿಲ್ಲದೆ ವೈರಾಗ್ಯ ತಾಳಿ, ಈ ಹಾರದಿಂದ ಯಾರು ಯಾರಿಗೆ ಎಂತೆಂತಹ ಕೇಡು ಬಂದಿದೆ ಎಂಬ ವಿವರಗಳನ್ನು ಹೀಗೆ ತಾಳ ಪತ್ರಗಳಲ್ಲಿ ಬರೆದು ಆ ಪತ್ರಗಳನ್ನೂ ಹಾರವನ್ನೂ ಭೂಸ್ಥಾಪನೆ ಮಾಡಿ, ತಪಸ್ಸಿಗೆ ಹೋಗಿದ್ದಾನೆ. ಹೀಗಿದೆ ಆ ಅದ್ಭುತ ಹಾರದ ವಿವರ. ಭೀಮನು ತಾನು ಓದಿದ ವಿವರಗಳನ್ನು ಕೂಡಲೇ

ಭೀಮನೆಂಬವನು ಒಬ್ಬ ಸಾಧಾರಣ ರೈತ. ತಂದೆಯ ಅನಂತರ ಅವನು ಸ್ವಂತವಾಗಿ ವ್ಯವಸಾಯ ಕ್ಕಿಳಿದನು. ಹಾಗೆ ಕಷ್ಟಪಡುವುದಕ್ಕೆ ಸಿದ್ಧನಾಗಿ ತನ್ನ ಮಾವಿನ ತೋಟವನ್ನು ಹೊಂದಿಕೊಂಡಿದ್ದ ಬಂಜರು ನೆಲವನ್ನು ಕೊಚ್ಚಿ ಉತ್ತು ಹಸನು ಮಾಡ ತೊಡ ಗಿದನು. ಭೀಮನು ಆ ಜಾಗದಲ್ಲಿ ಮಣ್ಣು ಅಗೆದೆತ್ತಿ ಹಾಕುತ್ತಿರುವಾಗ ಅವನ ಗುದ್ದಲಿಗೆ ಯಾವುದೋ ಕಲ್ಲಿನ ತೊಟ್ಟಿಯಂತೆ ತಗಲಿತು. ಅದನ್ನು ಜಾಗರೂಕತೆಯಿಂದ ಅಗೆದು ಎತ್ತಿದನು. ಅದು ಒಂದು ಕಲ್ಲಿನ ತೊಟ್ಟಿ ಯಾಗಿತ್ತು. ಅದರ ಮೇಲೊಂದು ಕಲ್ಲಿನ ಹಲಗೆಯೂ ಇತ್ತು. ಅದನ್ನು ತೆಗೆದಾಗ ತೊಟ್ಟಿಯೊಳಗೆ ಒಂದು ಕೊಡವು ಕೌಚಿರುವುದನ್ನು ನೋಡಿದನು. ಅದನ್ನು ನೆಟ್ಟಗೆ ಮಾಡಿದಾಗ ಆ ಕೊಡದ ಅಡಿಯಲ್ಲಿ ಒಂದು ವಿಚಿತ್ರ ರೀತಿಯ ಹಾರವೂ, ಒಂದು ತಾಳೆಯೋಲೆಯ ಗ್ರಂಥವೂ ಕಂಡಬಂದುವು. ಭೀಮನು ಕುತೂಹಲದಿಂದ ಮಣ್ಣು ಅಗೆಯುವ



ನಂಬಲಿಲ್ಲ. ಸ್ವಲ್ಪ ಹೊತ್ತು ಆಲೋಚನೆ ಮಾಡಿದನು. ಈ ಹಾರಕ್ಕೆ ಇತರರ ಅಂತರಂಗವನ್ನು ತಿಳಿಯುವ ಶಕ್ತಿ ಇದ್ದರೆ ಇದನ್ನು ಪ್ರಜೆಗಳ ಒಳತಿಗಾಗಿ ಉಪ ಯೋಗಿಸಬಹುದೆಂದು ಅವನಿಗೆ ತೋರಿತು. ಯಾವು ದಕ್ಕೂ ಮೊದಲು ಹಾರದ ಮಹತ್ವವನ್ನು ಪರೀಕ್ಷಿ ಸಿದರೇನು ತಪ್ಪು ?

ಹೀಗೆಂದುಕೊಂಡು ಅವನು ಅದನ್ನು ಕೊರಳಿನಲ್ಲಿ ಹಾಕಿಕೊಂಡು ಕೃಷ್ಣಸ್ವಾಮಿಯ ಮನೆಗೆ ಹೋದನು. ಕೃಷ್ಣಸ್ವಾಮಿಗೆ ಭೀಮನು ಸ್ವಲ್ಪ ಹಣ ಸಾಲ ಕೊಡುವು ದಿತ್ತು. ಅದನ್ನು ತಿರುಗಿ ಕೊಡುವ ನೆವನದಲ್ಲೇ ಅಲ್ಲಿಗೆ ಹೋದನು.

ಕೃಷ್ಣಸ್ವಾಮಿ ಎಂಬವನು ಜಮೀನ್ದಾರ ರಂಗ ಸ್ವಾಮಿಯ ತಮ್ಮ. ಭೀಮನು ಅವನ ಬಳಿಗೆ ಹೋದಾಗ ಅವನು ಮನಸ್ಸಿನಲ್ಲಿ ಅಣ್ಣನನ್ನು ಕೊಲ್ಲಿಸಿ ಪೂರ್ತಿ ಜಮೀನ್ದಾರಿಕೆಯನ್ನು ವಶಪಡಿಸಿಕೊಳ್ಳಲು ಹಂಚಿಕೆ ಹಾಕುತ್ತಿದ್ದನು. ಈ ಸಂಗತಿ ಭೀಮನಿಗೆ ಗೊತ್ತಾಗಿ ಹೋಯಿತು. ಅವನು ಕೃಷ್ಣಸ್ವಾಮಿ ಯೊಂದಿಗೆ, "ಅಯ್ಯಾ, ನಿಮ್ಮ ಅಣ್ಣ ಧರ್ಮಸ್ವರೂಪ ದವರು. ಅವರನ್ನು ಕೊಲ್ಲಿಸುವಂಥ ಕೆಟ್ಟ ಆಲೋಚನೆ ನೀವು ಮಾಡಬಾರದು. ಬೇಡ, ಈ ಆಲೋಚನೆ ಬಿಟ್ಟುಬಿಡಿ." ಎಂದನು.

ಕೃಷ್ಣಸ್ವಾಮಿ ಬೆಪ್ಪು ಬಡೆದವನಂತಾಗಿ, ಆಮೇಲೆ ಸಮಾಧಾನ ತಂದುಕೊಂಡು ಕಿರುನಗೆಯಿಂದ, "ಇದೇನು ಭೀಮಾ! ಸಂಬಂಧವಿಲ್ಲದೆ ಏನೋ ಹೇಳುವಿಯಲ್ಲಾ! ನನ್ನ ಅಣ್ಣನನ್ನು ನಾನು ಕೊಲ್ಲುವೆನೆ? ಯಾರು ಹೇಳಿದರು ನಿನಗೆ ಈ ಕೆಟ್ಟ ಚಾಡಿಯನ್ನು ?". ಎಂದನು.

"ಯಾರು ಹೇಳಿದರೇನು ಬಿಡೀ! ನೀವು ಮಾತ್ರ ನಿಮ್ಮ ಆಲೋಚನೆ ಬಿಡುವುದು ಒಳ್ಳೆಯದು. ಇಕೊಳ್ಳಿ, ನಾನು ನಿಮಗೆ ಕೊಡಬೇಕಾದ ಹಣ" ಎಂದು ಭೀಮನು ಕೃಷ್ಣಸ್ವಾಮಿಗೆ ಹಣಕೊಟ್ಟನು.

ಭೀಮನು ಅಲ್ಲಿಂದ ಹಿಂದಿರುಗವಾಗ ಕೃಷ್ಣಸ್ವಾಮಿ ತನ್ನ ಹಿಂದೆ ಇಬ್ಬರು ಬಂಟರನ್ನು ಕಳುಹಿಸಿ ತನ್ನನ್ನು ದಾರಿಯಲ್ಲಿ ಕೊಂದುಬಿಡಬೇಕೆಂದು ನಿಯಮಿಸಿದ ಸಂಗತಿ ಅವನಿಗೆ ಗೊತ್ತಾಯಿತು. ಆದುದರಿಂದ ಅವನು ದಾರಿ ತಪ್ಪಿಸಿ ಅಡ್ಡ ತಿರುಗಿ ಒಂದು ಮರಗಳ ತೋಪಿನಲ್ಲಿ ಪ್ರವೇಶಿಸಿ ಮಸಕು ಕತ್ತಲೆಯಲ್ಲಿ ಅಡಗಿದನು.

ಅವನನ್ನು ಕೊಲ್ಲಲು ಕೃಷ್ಣಸ್ವಾಮಿ ಕಳುಹಿಸಿದ ಬಂಟರು, ಭೀಮನು ಅಕಸ್ಮಾತ್ತಾಗಿ ಕಾಣದೇ ಹೋದು ದನ್ನು ನೋಡಿ, ಮರಗಳ ತೋಪಿನೊಳಗೆ ಹೊಕ್ಕಿರುವ ನೆಂದು ಊಹಿಸಿ, ಒಬ್ಬೊಬ್ಬನು ಒಂದೊಂದು ಮೂಲೆಯಿಂದ ಆ ತೋಪಿನೊಳಗೆ ಹೊಕ್ಕರು. ಭೀಮನು ಬಿಡಿಬಿಡಿಯಾಗಿ ದೊರೆತ ಆ ಇಬ್ಬರನ್ನೂ ಕಟ್ಟಿಗೆ ತುಂಡಿನಿಂದ ಬಲವಾಗಿ ಹೊಡೆದು ಬೀಳಿಸಿ, ಅವರ ಬಟ್ಟೆಗಳಿಂದಲೇ ಅವರನ್ನು ಮರಗಳಿಗೆ ಕಟ್ಟಿ, ತೋಪಿನಿಂದ ಹೊರಬಿದ್ದನು. ಆಗ ದಾರೀಹೋಕ



ನೊಬ್ಬನನ್ನು ನೋಡಿ ಕರೆದು, ದೊಡ್ಡ ಜಮೀನ್ದಾರರಿಗೆ ಇಲ್ಲಿ ನಡೆದ ಸಮಾಚಾರವನ್ನು ಹೇಳಿ ಕಳುಹಿಸಿದನು.

ಕೃಷ್ಣಸ್ವಾಮಿಯ ಬಂಟರು ಜಮೀನ್ದಾರರ ಆಳುಗಳಿಂದ ಬೀಳುವ ಹೊಡೆತವನ್ನು ತಾಳಲಾರದೆ, ನಿಜ ಸಂಗತಿಯನ್ನು ಕಕ್ಕಿದರು. ತನ್ನ ತಮ್ಮನೇ ತನ್ನನ್ನು ಕೊಲ್ಲುವ ಸಂಗತಿ ಜಮೀನ್ದಾರರಿಗೆ ತಿಳಿದು ಬೆರಗಾದರು. ತನ್ನ ಗುಟ್ಟು ಬಯಲಾಗಿ ಹೋಯಿತೆಂದು ತಿಳಿದ ಕೂಡಲೇ ಕೃಷ್ಣಸ್ವಾಮಿ ಎಲ್ಲಾ ಬಿಟ್ಟು ಎತ್ತಲೋ ಓಡಿಹೋದನು. ತನ್ನ ಗೂಢ ಶತ್ರುವನ್ನು ಓಡಿಸಿ ಒಳಿತನ್ನು ಮಾಡಿದ ಭೀಮನನ್ನು ಜಮೀನ್ದಾರರು ತುಂಬಾ ಶ್ಲಾಘಿಸಿ ಸತ್ಕರಿಸಿದರು.

ಆ ಮೇಲೆ ಕೂಡಾ ಭೀಮನ ಹಾರವು ಅನೇಕ ಜನರಿಗೆ ಒಳಿತನ್ನುಂಟು ಮಾಡಿತು. ಜಯಲಕ್ಷ್ಮಿ ಎಂಬ ಕನ್ಯೆಯ ಮನಸ್ಸು ತನ್ನನ್ನು ಬಯಸುವ ಸಂಗತಿ ಆ ಹಾರದಿಂದಲೇ ಅವನಿಗೆ ಗೊತ್ತಾಯಿತು. ಕೂಡಲೇ ಭೀಮನು ಅವಳ ತಂದೆಯೊಂದಿಗೆ ಮಾತಾಡಿ ಮದುವೆಗೆ ಒಪ್ಪಿಸಿ, ಜಯಲಕ್ಷ್ಮಿಯನ್ನು ವಿವಾಹ ಮಾಡಿಕೊಂಡು ಸಂತೋಷಪಟ್ಟನು.

ಇತರರ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳುವ ಶಕ್ತಿ ಭೀಮನಿಗಿರುವುದೆಂದು ಕ್ರಮಕ್ರಮವಾಗಿ ಹತ್ತು ಮಂದಿಗೆ ತಿಳಿಯ ತೊಡಗಿತು. ಅವನು ಕೆಲವು ಮಂದಿ ಕಳ್ಳರ ಆಲೋಚನೆಗಳನ್ನು ಮೊದಲೇ ತಿಳಿದು, ರಾಜಭಟರಿಗೆ ತಿಳಿಸಿ, ಎಲ್ಲಿ ಯಾವ ಸಮಯಕ್ಕೆ ಕಳ್ಳರು ನುಗ್ಗುವರೆಂಬುದನ್ನೂ ಹೇಳಿ, ಆ ಕಳ್ಳರು ಸಿಕ್ಕಿಬೀಳುವಂತೆ ಮಾಡಿದನು.

ಹೀಗಿರಲು ಬರಬರುತ್ತ ಭೀಮನೆಂದರೆ ಎಲ್ಲರಿಗೂ ಭಯ ಹತ್ತಿ ಕೊಂಡಿತು. ತಮ್ಮ ಮನಸ್ಸಿನಲ್ಲಿ ಎಂತಹ ಕೆಟ್ಟ ಆಲೋಚನೆ ಮೂಡಿದರೂ ಅದು ಅವನಿಗೆ ಎಲ್ಲಿ ತಿಳಿದುಬಿಡುತ್ತದೋ ಎಂದು ಎಲ್ಲರೂ ಹೆದರ ತೊಡಗಿದರು. ಜಾರ, ಚೋರ, ಹಂತಕರಂತಹ ಅಪರಾಧಿಗಳಿಗೆ ಭೀಮನು ಸಿಂಹಸ್ವಪ್ನವಾದನು. ಅವನನ್ನು ಕೊಲ್ಲುವುದೊಂದು ಅವರಿಗೆ ದೊಡ್ಡ ವಿಷಯವಾಗಿರಲಿಲ್ಲ. ಆದರೆ ಅವನು ಆ ಸಂಗತಿಯನ್ನು ಕೂಡಾ ತಿಳಿದುಕೊಂಡು ಬಿಡುತ್ತಾನೆಂಬುದೇ ಸಿಕ್ಕು! ಆದರೆ ಭೀಮನ ಶಕ್ತಿ ಪೂರಾ ಅವನ ಕೊರಳಿನಲ್ಲಿರುವ ಬರಡು ಹಾರದಲ್ಲಿದೆಯೆಂದು ಯಾರಿಗೂ ಗೊತ್ತಿರಲಿಲ್ಲ.

ಬೇಗದಲ್ಲೇ ಭೀಮನ ಅಂತರಂಗ ಜ್ಞಾನದ ಸಂಗತಿ ದೊಡ್ಡ ದೊಡ್ಡವರಿಗೂ ಗೊತ್ತಾಯಿತು. ಅವರು ಅವನನ್ನು ಕರೆಯಿಸಿ ಆದರಿಸಿ, ತಮ್ಮ ತಮ್ಮ ಕಡೆಯವರು ತಮ್ಮನ್ನು ಕುರಿತು ಏನು ಅಂದುಕೊಳ್ಳುತ್ತಾರೆಂಬುದನ್ನು ಅವನ ಮೂಲಕ ತಿಳಿಯಲು ಪ್ರಯತ್ನಿಸಿದರು.

ಭೀಮನು ತನ್ನಿಂದ ಎಲ್ಲರಿಗೂ ಉಪಯೋಗವಾಗುತ್ತದೆಂದು ಅಂದುಕೊಂಡಿದ್ದರೆ, ಅದರಲ್ಲಿ ಭಯಂಕರವಾದ ಅಪಾಯವಿರುವ ಸಂಗತಿ ಬೇಗದಲ್ಲೇ ಅವನಿಗೆ ಗೊತ್ತಾಯಿತು. ಉನ್ನತ ಪದವಿಗಳಲ್ಲಿರುವವರೆಲ್ಲರೂ ಒಬ್ಬರ ನಾಶವನ್ನೇ ಇನ್ನೊಬ್ಬರು ಬಯು

ಸುತ್ತಿದ್ದಾರೆಂದು ಅರಿತನು. ಆ ಪರಿಸ್ಥಿತಿಯಲ್ಲಿ ಯಾರ ಮನಸ್ಸಿನ ಮಾತನ್ನು ಯಾರಿಗೆ ಹೇಳುವುದು? ತಾನು ದೊಡ್ಡ ಸಿಕ್ಕಾಟದಲ್ಲಿ ಸಿಕ್ಕಿಹಾಕಿಕೊಂಡಂತೆ ತೋರುತಿತ್ತು ಅವನಿಗೆ.

ಅವನು ತಾನು ತಿಳಿದುಕೊಂಡ ವಿಷಯಗಳನ್ನು ತನ್ನಲ್ಲೇ ಹುದುಗಿಸಿಕೊಂಡು, ತನ್ನನ್ನು ನಿಯೋಜಿಸಿಕೊಳ್ಳುವವರಿಗೆ ಸುಳ್ಳು ಹೇಳಲು ತೊಡಗಿದನು. ಮಂತ್ರಿಗಳೂ, ಸೇನಾಪತಿಗಳೂ, ಆಸ್ಥಾನವಿದ್ವಾಂಸರೂ, ಪುರೋಹಿತರೂ, ವೈದ್ಯರೂ ಎಲ್ಲರೂ ಕೂಡಿ ಭೀಮನನ್ನು ರಾಜನ ದರ್ಬಾರಿಗೆ ಮೆಲ್ಲನೆ ಪ್ರವೇಶಗೊಳಿಸಿ, ಮಹಾರಾಜರು ಯಾರನ್ನು ಕುರಿತು ಏನು ಅಂದುಕೊಳ್ಳುತ್ತಾರೆಂಬುದನ್ನು ತಮಗೆ ಆಗಾಗ ಹೇಳಬೇಕೆಂದು ಕೇಳಿಕೊಂಡರು. ಇತರರ ಮನಸ್ಸನ್ನು ತಿಳಿದುಕೊಳ್ಳುವ ಶಕ್ತಿ ಭೀಮನಿಗಿರುವ ಸಂಗತಿಯನ್ನು ಒಬ್ಬನು ರಾಜನೊಂದಿಗೂ ಹೇಳಿಬಿಟ್ಟನು.

ರಾಜನು ಭೀಮನನ್ನು ಪರೀಕ್ಷಿಸಬೇಕೆಂದು ಯೋಚಿಸಿ, "ನಾನು ಈಗ ಏನು ಅಂದುಕೊಳ್ಳುತ್ತಿದ್ದೇನೆ?" ಎಂದು ಭೀಮನನ್ನು ಕೇಳಿದನು. "ನಾನು ತಮ್ಮ ಮನಸ್ಸನ್ನು ತಿಳಿದುಕೊಳ್ಳಲಾರೆನೆಂದು ನಿಮಗೆ ತೋರುತ್ತದೆ" ಎಂದು ಕೂಡಲೇ ಉತ್ತರಕೊಟ್ಟ ಭೀಮ.

ರಾಜನು ಮೆಚ್ಚಿ ಅವನು ದಿನಾ ದರಬಾರಿಗೆ ಬರಲು ಅನುಮತಿ ಕೊಟ್ಟನು. ಕೆಲವು ದಿನಗಳ ಮೇಲೆ ರಾಜನು ಭೀಮನನ್ನು ಕರೆದು, "ನಾನು ನಿನ್ನನ್ನು ಏಕೆ ಕರೆದೆ?" ಎಂದು ಕೇಳಿದನು.

"ನನ್ನ ಮೂಲಕ ರಾಣಿಯನ್ನು ಕುರಿತು ತಿಳಿಯಬೇಕೆಂದು ಆಲೋಚಿಸಿದ್ದೀರಿ" ಎಂದನು ಭೀಮ.

"ಭೇಷ್! ಸರಿಯಾಗಿ ಹೇಳಿದಿ! ನೀನು ರಾಣಿಯ ಬಳಿಗೆ ಹೋಗಿ ಈ ಚೀಟನ್ನು ಕೊಟ್ಟು. ಅವಳು ಏನು ಹೇಳುವಳೆಂದು ತಿಳಿದುಕೊಂಡು, ಅದೇ ಸಮಯದಲ್ಲಿ ಅವಳ ಮನಸ್ಸಿನಲ್ಲಿರುವ ರಹಸ್ಯವನ್ನು



ಕೂಡಾ ತಿಳಿದು ಬಂದು ನನಗೆ ರಹಸ್ಯವಾಗಿ ಹೇಳಿಬಿಡು," ಎಂದನು ರಾಜ.

ಅಂತೆಯೇ ಭೀಮನು ರಾಜನು ಕೊಟ್ಟ ಚೀಟನ್ನು ಅಂತಃಪುರಕ್ಕೆ ತೆಗೆದುಕೊಂಡು ಹೋಗಿ ರಾಣಿಗೆ ಕೊಟ್ಟನು. ಅವಳು ಅದನ್ನು ನೋಡಿ, "ಸರಿಯೆಂದು ಹೇಳಿದೆನೆಂದು ಮಹಾರಾಜರಿಗೆ ಹೇಳು" ಎಂದಳು. ಆದರಲ್ಲಿ ವಿಶೇಷವೇನೂ ಇರಲಿಲ್ಲ. "ಸಾಯಂಕಾಲ ಸಂಗೀತದ ಏರ್ಪಾಡು ಮಾಡಲೇ?" ಎಂದು ರಾಜನು ಚೀಟಿಯಲ್ಲಿ ಬರೆದಿದ್ದ.

ಆದರೆ ಭೀಮನಿಗೆ ಆ ಸಮಯದಲ್ಲಿ ರಾಣಿಯ ಅಂತರಂಗ ರಹಸ್ಯವು ಜಳಜಳನೆ ತಿಳಿಯಿತು. ಅವಳಿಗೆ ರಾಜನ ಮೇಲೆ ಸ್ವಲ್ಪವೂ ಪ್ರೇಮವಿರಲಿಲ್ಲ. ಅವಳಿಗೆ ಪ್ರಿಯರಾದ ಅಧಿಕಾರಿಗಳು ಬೇರೆ ಇದ್ದರು. ಅವರನ್ನು ಕುರಿತೇ ಅವಳು ನೆನೆದುಕೊಂಡು ಅದಕ್ಕೆ ತಕ್ಕ ಹಂಚಿಕೆ ಹೆಣೆದುಕೊಂಡಿದ್ದಳು. ಭೀಮನು ರಾಜನ ಬಳಿಗೆ ಹಿಂದಿರುಗಿ ಬಂದು,

"ಮಹಾರಾಜರೇ, ರಾಣಿಯವರ ಮನಸ್ಸಿನೊಳಗೆ ನೀವೇ ತುಂಬಿಕೊಂಡಿದ್ದೀರಿ. ನಿಮಗೆ ಯಾವುದು ಸಂತೋಷವೋ ಅದನ್ನು ಕುರಿತು ನೆನೆಯುತ್ತಿದ್ದಾರೆ! ಒಂದೇ ಮಾತು, ಮಹಾಪತಿವ್ರತೆ!" ಎಂದನು. ರಾಜನು ಸಂತೋಷದಿಂದ ತನ್ನ ಕೊರಳಲ್ಲಿದ್ದ ರತ್ನ ಹಾರವನ್ನು ತೆಗೆದು ಭೀಮನಿಗೆ ಕೊಟ್ಟನು.

ಆ ದಿನ ರಾತ್ರಿ ಭೀಮನು ತನ್ನ ಅದ್ಭುತ ಶಕ್ತಿಯ ಹಾರವನ್ನು ತೆಗೆದು ಬಚ್ಚಲು ಒಲೆಯ ದೊಡ್ಡ ಉರಿಯುವ ಬೆಂಕಿಗೆ ಹಾಕಿಬಿಟ್ಟನು. ಅದು ವಿಚಿತ್ರ ಧ್ವನಿಯಿಂದ ಸುಟ್ಟು ಕರ್ಪೂರದ ಹಾಗೆ ಆವಿಯಾಗಿ ಹೋಯಿತು. ಕರಗಲೂ ಇಲ್ಲ. ಅದರ ಬೂದಿ ಕೂಡಾ ಉಳಿದಿರಲಿಲ್ಲ. ಮತ್ತೆ ಅದೇ ರಾತ್ರಿಯಲ್ಲಿ ತನಗೆ ದೊಡ್ಡ ದೊಡ್ಡವರು ಕೊಟ್ಟ ಧನವನ್ನೆಲ್ಲಾ ಕಟ್ಟಿಕೊಂಡು, ಹೆಂಡತಿಯನ್ನೂ ಕರೆದುಕೊಂಡು ಭೀಮನು ಮತ್ತೊಂದು ದೇಶಕ್ಕೆ ಹೊರಟುಹೋದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಅಂತಹ ಅದ್ಭುತ ಶಕ್ತಿಯ ಹಾರವನ್ನು ಭೀಮನು ತನ್ನ ಕೈಮುಟ್ಟ ನಿರ್ಮೂಲಿಸಿಬಿಟ್ಟನಲ್ಲ? ಅದೇಕೆ? ಅದು ತನಗೂ ಲೋಕಕ್ಕೂ ಸಹಾ ಎಷ್ಟೋ ಒಳಿತನ್ನು ಮಾಡಿತಲ್ಲವೆ? ಅದರ ರಹಸ್ಯ ಕೂಡಾ ಅವನ ಹೊರತು ಬೇರೆ ಯಾರಿಗೂ ಗೊತ್ತೂ ಇರಲಿಲ್ಲ. ಅದನ್ನು ಧರಿಸಿಕೊಂಡಿರುತ್ತಿದ್ದರೆ ಅವನಿಗೇನು ನಷ್ಟವಿತ್ತು? ಈ ಸಂದೇಹಕ್ಕೆ ತಕ್ಕ ಉತ್ತರ ಗೊತ್ತಿದ್ದೂ ಹೇಳದೇ ಹೋದರೆ ನಿನ್ನ ತಲೆಯೊಡೆದು ಹೋಗುತ್ತದೆಂಬುದು ತಿಳಿದಿರಲಿ!" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಯಾವ ವಿಧವಾದ ಶಕ್ತಿಯಾದರೂ ಬಲವಂತರು ದುರುಪಯೋಗ ಪಡಿಸಬಲ್ಲರು. ಬಲಹೀನರು ಆ ಶಕ್ತಿಗೆ ಹೆದರಿ ತಪ್ಪುಮಾಡುವುದನ್ನು ಬಿಟ್ಟ ಮಾತ್ರಕ್ಕೆ ಜೀವಿತದಲ್ಲಿರುವ ವಕ್ರಗಳು ನೇರಾಗಲು ಸಾಧ್ಯವಿಲ್ಲ. ಭೀಮನ ಹಾರದಲ್ಲಿರುವ ಶಕ್ತಿ, ಅಲ್ಪರನ್ನು ಪೀಡಿಸಿ ಒಳಿತು ಮಾಡಿದಂತೆ ಕಾಣುವುದಾದರೂ, ಅದೇ ಶಕ್ತಿ ಬಲಿಷ್ಠರ ವಿಷಯಕ್ಕೆ ಬರುವಾಗ ಭೀಮನನ್ನೇ ಪೀಡಿಸಲು ತೊಡಗಿತು. ಆಗ ಅವನೇ ಅಲ್ಪನಾಗಿ ತನ್ನ ಶಕ್ತಿ ಮತ್ತೊಬ್ಬರಿಗೆ ಉಪಯೋಗಪಡುವ ಹಾಗೆ ಮಾಡುವುದರಲ್ಲಿ ವಿಫಲನಾದನು. ಭೀಮನು ಸ್ವಂತದಲ್ಲಿ ಒಳ್ಳೆಯವನು, ಅಂಥವನಿಗೆ ವಕ್ರ ಮಾರ್ಗದಲ್ಲಿ ನಡೆಯುವುದು ಸಂಕಟವೆನಿಸುತ್ತದೆ. ಅದಕ್ಕೇ ಅವನು ಆ ಹಾರವನ್ನು ನಾಶಮಾಡಿ, ತನ್ನ ಅಶಾಂತಿಯನ್ನು ನಿವೃತ್ತಿ ಮಾಡಿಕೊಂಡನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಎಂದಿನಂತೆ ಮರದ ಕೊಂಬೆಯನ್ನು ಸೇರಿ ನೇತಾಡತೊಡಗಿತು.





# ಬೋಳುಸಲಹೆ

ಒಂದು ಊರಿನಲ್ಲಿ ಮೀನಾಕ್ಷಿ ಎಂಬ ಹುಡುಗಿ, ಇಬ್ಬರು ಅಣ್ಣಂದಿರ ನಡುವೆ ತುಂಬಾ ಅಕ್ಕರೆಯಿಂದ ಬೆಳೆದು ದೊಡ್ಡವಳಾದಳು. ಅವಳಿಗೆ ಮದುವೆಯ ವಯಸ್ಸು ಬಂದುದನ್ನು ನೋಡಿ ಅವಳ ಅಣ್ಣಂದಿರು ಅವಳಿಗೆ ಮದುವೆ ಮಾಡಬೇಕೆಂದು ವರಾನ್ವೇಷಣೆ ಮಾಡ ತೊಡಗಿದರು. ಅವರಿಗೆ ರಾಂಪುರದಲ್ಲಿರುವ ಗುಣಶೇಖರನೆಂಬವನ ತಮ್ಮ ಸೋಮಶೇಖರನು ಒಪ್ಪಿಗೆಯಾಗಿ ಮದುವೆಯಾಯಿತು. ಆ ಮೇಲೆ ಮೀನಾಕ್ಷಿಯ ಅಣ್ಣಂದಿರುಕೂಡಾ ಮದುವೆಯಾದರು.

ಮೀನಾಕ್ಷಿ ಗಂಡನ ಮನೆಯಲ್ಲಿ ಸುಖವಾಗಿದ್ದಳು. ಗಂಡನ ರೂಪ ಗುಣ ನಡತೆಗಳೆಲ್ಲಾ ಅವಳಿಗೆ ಚೆನ್ನಾಗಿ ಹಿಡಿಸಿತ್ತು. ಅವನು ಎಲ್ಲಾ ವಿಧದಲ್ಲಿ ಯೋಗ್ಯನಾಗಿದ್ದನು. ವ್ಯಾಪಾರ ವೃತ್ತಿಯಲ್ಲಿ ಅವನಿಗೆ ಒಳ್ಳೆಯ ಲಾಭವೂ ಬರುತ್ತಿದ್ದಿತು. ಅವನಿಗೂ ಅವನ ಅಣ್ಣನಿಗೂ ಸೇರಿ ಆಸ್ತಿಪಾಸ್ತಿಗಳ ಅಡಿಪಾಯವೂ ಗಟ್ಟಿಯಾಗಿದ್ದಿತು. ಮೀನಾಕ್ಷಿ ತೃಪ್ತಳಾಗಿದ್ದಳು.

ಬರಬರುತ್ತ ಒಂದೇ ಒಂದು ವಿಷಯದಲ್ಲಿ ಅವಳಿಗೆ ಅತೃಪ್ತಿ ಕಾಣ ತೊಡಗಿತು. ಅದೇನೆಂದರೆ ಮನೆಯ ಯಜಮಾನಿಕೆ ಹಿರಿಯನ ಹೆಂಡತಿಯ ಕೈಯಲ್ಲಿದ್ದುದೇ. ಅವಳಿಗೇನು ಬೇಕಾದರೂ ಅಕ್ಕನನ್ನು ಕೇಳಬೇಕಿತ್ತು. ಅಕ್ಕನು ತುಂಬಾ ಧಾರಾಳ ಮನಸ್ಸಿನವಳಾದರೂ ಯಜಮಾನಿ ಎಂಬ ಗೌರವವೊಂದು ಅವಳಿಗೆ ಹೆಚ್ಚಿಗಿದೆಯಲ್ಲ? ತಾನು ಅವಳಿಗಿಂತ ಕಡಿಮೆಯವಳಾಗುವೆನಲ್ಲ! ಮೀನಾಕ್ಷಿಯ ಮೇಲೆ ಹಿರಿಯವಳ ಪ್ರೀತಿ ವಿಶ್ವಾಸಗಳೆಲ್ಲ ತುಂಬಾ ಇದ್ದರೂ ಮೀನಾಕ್ಷಿಗೆ ಬೇಕಾದ್ದು ಅವಲ್ಲ, ಯಜಮಾನಿಕೆ!

ಮೀನಾಕ್ಷಿ ತನ್ನ ಇಚ್ಛೆಯನ್ನು ಸ್ಪಷ್ಟವಾಗಿ ಹೇಳದೆ ಡೊಂಕು ರೀತಿಯಲ್ಲಿ ಗಂಡನೊಂದಿಗೆ ಹೇಳಿ ನೋಡಿದಳು. ಸೋಮಶೇಖರನು ಹೆಂಡತಿಯ ಅಭಿಪ್ರಾಯವನ್ನು ಅರ್ಥಮಾಡಿಕೊಳ್ಳದವನಂತೆ ಸುಮ್ಮನಿದ್ದುಬಿಟ್ಟನು. ಕಡೆಗೊಂದು ದಿನ ಮೀನಾಕ್ಷಿ ತಾಳ್ಮೆ ಮೀರಿ, "ನಾವು ಪಾಲಾಗಿ ಬೇರೆ ಹೋಗಿಬಿಡಬೇಕು. ಏನಂತೀರಿ?" ಎಂದು ಸ್ಪಷ್ಟವಾಗಿಯೇ ಕೇಳಿಬಿಟ್ಟಳು.

ಸೋಮಶೇಖರನು ಆಶ್ಚರ್ಯಪಟ್ಟವನಂತೆ ಅವಳನ್ನು ನೋಡಿ, "ಆಲೋಚಿಸುತ್ತೇನೆ!" ಎಂದನು.

ಅವಳು ತನ್ನ ಗಂಡನ ನಿರ್ಣಯಕ್ಕೆ ಅನೇಕ ದಿನ ಕಾಯುತ್ತಾ ಇದ್ದಳು. ಆದರೆ ಸೋಮಶೇಖರನು ಆ ವಿಷಯ ಮಾತೇ ಎತ್ತಲಿಲ್ಲ.

**ಜಿ. ಶಿವಕುಮಾರ**

ಒಂದು ದಿನ ಸೋಮಶೇಖರನಿಗೆ ವ್ಯಾಪಾರದ ನಿಮಿತ್ತವಾಗಿ ಶೋಣಾಪುರಕ್ಕೆ ಹೋಗಬೇಕಾಗಿ ಬಂತು. ಆಗ ಮೀನಾಕ್ಷಿ ಅವನೊಂದಿಗೆ, "ದಾರಿತಾನೇ? ಶೋಣಾಪುರದಿಂದ ಬರುವಾಗ ನನ್ನ ಅಣ್ಣಂದಿರನ್ನೂ ಸ್ವಲ್ಪ ನೋಡಿ ಬಂದುಬಿಡಿ" ಎಂದಳು. ಆಗಲೆಂದು ಹೇಳಿ ಸೋಮಶೇಖರನು ಹೊರಟುಹೋದನು.

ಅವನು ಶೋಣಾಪುರದಿಂದ ಹಿಂದಿರುಗಿ ಬಂದ ಮೇಲೆ ಮೀನಾಕ್ಷಿ ತನ್ನ ಅಣ್ಣಂದಿರು ಹೀಗಿರುವರೆಂದು ಗಂಡನನ್ನು ಕೇಳಿದಳು. ಅದಕ್ಕೆ ಸೋಮಶೇಖರನು, "ಅವರಿಗೇನು? ಚೆನ್ನಾಗೇ ಇದ್ದಾರೆ. ನಿನ್ನ ಅತ್ತಿಗೇರ ಪದ್ಧತಿ ಒಂದು ಥರಾ ಆಗಿದೆಯಂತೆ" ಎಂದನು. "ಏನಾಯಿತಂತೆ?" ಎಂದು ಆತುರದಿಂದ ಕೇಳಿದಳು ಮೀನಾಕ್ಷಿ. "ನಿನ್ನ ಅಣ್ಣಂದಿರಿಬ್ಬರೂ ಪಾಲು ಮಾಡಿಕೊಂಡು ಬೇರೆಬೇರೆಯಾಗಬೇಕೆಂದು ತಗಾದೆ ಮಾಡುತ್ತಿದ್ದಾರಂತೆ. ಏನು ಮಾಡುವುದೆಂದು ನನ್ನ ಆಲೋಚನೆ ಕೇಳಿದರು" ಎಂದ ಸೋಮಶೇಖರ.

"ನೀವೇನು ಹೇಳಿದಿರಿ?" ಎಂದು ಕೇಳಿದಳು ಮೀನಾಕ್ಷಿ. "ಮನಸ್ಸು ಹೊಂದಿಕೊಳ್ಳದೇ ಹೋದರೆ ಬೇರೆ ಬೇರೆ ಹೋಗುವುದೇ ಒಳ್ಳೇದೆಂದು ಹೇಳಿದ್ದೇನೆ. ಇನ್ನೇನಾಗುತ್ತೋ ಏನು ಮಾಡುತ್ತಾರೋ ನೋಡಬೇಕು." ಎಂದ ಸೋಮಶೇಖರ. "ಒಳ್ಳೇ ಹೇಳಿದಿರಲ್ಲ, ನಿಮ್ಮ ಬೋಳು ಸಲಹೆ! ಚೆನ್ನಾಗಿದೆ!" ಎಂದು ಸಿಡುಕಿದಳು ಮೀನಾಕ್ಷಿ. ತನ್ನ ಅಣ್ಣಂದಿರು ಬೇರೆ ಬೇರೆಯಾಗುವರೆಂಬ ಆಲೋಚನೆಯೇ ಅವಳ ಗಂಟಲಲ್ಲಿ ಕಹೀಲೇಹ್ಯ ಸೇರಿಕೊಂಡಂತಾಯಿತು. ಅವಳು ಮುಖ ಸಿಂಡರಿಸಿಕೊಂಡು ಸರಸರನೆ ಹೋಗಿಬಿಟ್ಟಳು.

ಮತ್ತೆ ಕೆಲವು ದಿನಗಳ ಮೇಲೆ ಮೀನಾಕ್ಷಿ ತಾವು ಬೇರೆ ಹೋಗುವ ಆಲೋಚನೆಯನ್ನು ಏನು ನಿರ್ಣಯಿಸಿದಿರೆಂದು ಗಂಡನೊಂದಿ ಕೆದಕಿದಳು. "ಹೀಗೆ ಎಷ್ಟು ದಿನ ಆಲೋಚಿಸುತ್ತೀರಿ?" ಎಂದು ಕೇಳಿದಳು.

"ನಿರ್ಣಯಿಸಲಿಕ್ಕೇನಿದೆ? ಈಗ ನಿನ್ನ ಮಾತು ಕೇಳಲಾರೆ. ಅಷ್ಟೇ" ಎಂದ ಶೇಖರ. "ಏಕೆ?" ಎಂದು ಜೋರಿನಿಂದ ಕೇಳಿದಳು ಮೀನಾಕ್ಷಿ. "ಅದು ಬೋಳು ಸಲಹೆ ಆದ್ದರಿಂದಲೇ! ನನಗೂ ನಿನ್ನ ಮಾತೇ ಸರಿ ಅನಿಸುತ್ತದೆ." ಎಂದ ಸೋಮಶೇಖರ.

"ನನ್ನ ಸಲಹೆ ನಿಮಗೆ ಬೋಳಾಗಿ ಕಾಣುತ್ತೇನು?" ಎಂದು ಕೇಳಿದಳು ಮೀನಾಕ್ಷಿ.

"ನಾನು ನಿನ್ನ ಅಣ್ಣಂದಿರಿಗೆ ಹೇಳಿದ ಆಲೋಚನೆ ಬೋಳು ಸಲಹೆಯಾದರೆ, ನೀನು ನನಗೆ ಹೇಳುವ ಆಲೋಚನೆ ಕೂಡಾ ಅದೇ ತಾನೇ?" ಎಂದ ಸೋಮಶೇಖರ. ಮೀನಾಕ್ಷಿಗೆ ದವಡೆಗೆ ಪೆಟ್ಟು ಬಿದ್ದಂತಾಯಿತು. ಬಾಯಿಯಿಂದ ಮಾತೇ ಹೊರಡಲಿಲ್ಲ. ಮತ್ತೆ ಎಂದಿಗೂ ಬೇರೆಯಾಗುವ ಮಾತೂ ಎತ್ತಲಿಲ್ಲ.






# ಓಡಿಹೋದ ಕಳ್ಳ

ಒಂದು ಊರಿನಲ್ಲಿ ಕತ್ತಲೆಯಾದಮೇಲೆ, ಯಾವನೋ ಒಬ್ಬನು ಓಡುತ್ತಾ ಒಂದು ಮನೆಯ ಬಾಗಿಲನ್ನು ತಟ್ಟಿದನು. ಆ ಮನೆಯಲ್ಲಿ ರಮಾ ಎಂಬ ಹುಡುಗಿಯೊಬ್ಬಳೇ ಇದ್ದಳು.

ತಂದೆಯೇ ಬಂದರೆಂದುಕೊಂಡು ಅವಳು ಬಾಗಿಲು ತೆರೆದಳು. ತೆರೆಯುವಾಗಲೇ ಯಾರೋ ಹೊಸಬನೆಂದು ಗೊತ್ತಾಯಿತು. ಬಾಗಿಲು ತಟ್ಟಿದ ಮನುಷ್ಯ ಬಾಗಿಲು ದೂಡಿಕೊಂಡು ಅವಸರದಿಂದ ಒಳಗೆ ಹೊಕ್ಕು, ಫಕ್ಕನೆ ಬಾಗಿಲು ಹಾಕಿ ತಾಳಜಡಿದು, “ಕೂಗಬೇಡ. ಕುತ್ತಿಗೆ ಹಿಚಿಕಿ ಕೊಂದು ಹಾಕ್ತೇನೆ! ಎಲ್ಲದಕ್ಕೂ ತಯಾರಾಗಿ ಬಂದಿದ್ದೇನೆ. ಸೆರೆಮನೆಯಿಂದ ತಪ್ಪಿಸಿಕೊಂಡು ಬಂದವನು ನಾನು! ಜೀವದಾಸೆ ಬಿಟ್ಟವನು! ಉಸಿರೆತ್ತಿದರೆ ಜೋಕೆ!” ಎಂದು ಕಟುವಾಗಿ ನುಡಿದನು ಕಳ್ಳ.

ಆಗಲೇ ಬೀದಿಯಲ್ಲಿ ನಾಲ್ಕಾರು ಜನರು ಓಡಿ ಹೋದ ಶಬ್ದವಾಯಿತು. ಅವರು ಕಳ್ಳನನ್ನು ಓಡಿಸಿಕೊಂಡು ಬಂದ ರಕ್ಷಕಭಟರು. ಅವರು ದೂರ ಹೋಗುವವರೆಗೆ ಸುಮ್ಮನಿದ್ದು ರಮೆ ಮುಗುಳು ನಗುತ್ತ, “ಸೆರೆಮನೆಯೊಳಗೆ ಸುಖವಾಗಿರುವುದನ್ನು ಬಿಟ್ಟು ಏನುಸುಖ ಬಾಚಿಕೊಳ್ಳೋಣ ಅಂತ ತಪ್ಪಿಸಿಕೊಂಡು ಬಂದೆಯೋ? ಎಲ್ಲಿಗೆ ಹೋಗುವಿಯೋ? ಏನು ಮಾಡಿ ಬದುಕುವಿಯೋ?” ಎಂದಳು.

ಕಳ್ಳನು ಕೋಪದಿಂದ, “ಆ ವಿಷಯವೆಲ್ಲ ಕೇಳಬೇಡ. ಏನಾದರೂ ಮಾಡಿಕೊಂಡೇನು, ಅದಿರಲಿ, ಮನೆಯೊಳಗೆ ಇನ್ನಾರಿದ್ದಾರೆ? ಎಲ್ಲಿದ್ದಾರೆ” ಎಂದು ಕೇಳಿದ.

“ಏನೂ ಹೆದರಬೇಡ. ನಾನು ಒಬ್ಬಳೇ ಇದ್ದೇನೆ. ಫಕ್ಕನೆ ಯಾರೂ ಬರುವುದಿಲ್ಲ. ಒಳಗೆ ಅಡಿಗೆಗಿಟ್ಟಿದ್ದೇನೆ. ಅಡಿಗೇ ಮನೆಗೆ ಬರುತ್ತಿಯಾ?” ಎನ್ನುತ್ತ ರಮೆ ಮುಂದೆ ನಡೆದಳು.

ಕಳ್ಳ ಅವಳ ಹಿಂದೆಯೇ ಅಂಜುತ್ತ ಆ ಕುತ್ತ ಅಡಿಗೇಕೋಣೆಗೆ ಹೋದ. ಅವಳು ಒಂದು ಮಣೆಯನ್ನು ಹಾಕಿ, “ಕೂತುಕೋ” ಎಂದಳು. ಕಳ್ಳ ಕುಳಿತು ಮೂಲೆ ಮುಡುಕುಗಳನ್ನೆಲ್ಲಾ ನೋಡಿದ. ರಮೆ ಬದನೇಕಾಯಿ ಹೆಚ್ಚುತ್ತ, ಕಣ್ಣೀರು ತುಂಬಿ ಬಂದವಳಂತೆ, ಸೆರಗಿನಿಂದ ಕಣ್ಣು ಒರೆಸಿಕೊಳ್ಳುವುದನ್ನು ನೋಡಿ, ಕಳ್ಳ “ನಾನು ನಿನಗೇನೂ ಮಾಡಲಿಲ್ಲವಲ್ಲಾ? ಕಣ್ಣಿನಲ್ಲಿ ನೀರೇಕೆ? ಏನಾಯಿತು?” ಎಂದು ಕೇಳಿದ.

ಎಂ. ಕೆ. ಈಶ್ವರರಾವ್



"ಅದು, ನಿನ್ನನ್ನು ನೋಡಿ ನನ್ನ ಅಣ್ಣನ ನೆನಪು ಬಂತು. ಅವನು ಒಂದುಸಾರಿ ಆವೇಶಬಂದು ಯಾರನ್ನೋ ಹೊಡೆದುಬಿಟ್ಟ. ರಕ್ಷಕಭಟರು ಅವನನ್ನು ಎಳೆದುಕೊಂಡುಹೋಗಿ ಸೆರೆಮನೆಯಲ್ಲಿ ಹಾಕಿದರು. ತಾಳ್ಮೆಯಿಂದ ಅಲ್ಲೇ ಇರಬಹುದಿತ್ತು. ದುಡುಕಿದ. ಒಂದು ದಿನ ರಾತ್ರಿ ಅವನು ನಿನ್ನಹಾಗೇ ಸೆರೆಮನೆಯಿಂದ ತಪ್ಪಿಸಿಕೊಂಡು ಓಡಿ ಬಂದುಬಿಟ್ಟ. ಬಂದಕ್ಷಣದಿಂದಲೂ ಅವನಿಗೆ ಶಾಂತಿಯೇ ಇಲ್ಲ. ಸಮಾಧಾನವೇ ಇಲ್ಲ. ನಿದ್ದೆಯೂ ಇಲ್ಲ, ಆಹಾರದ ಮೇಲೆ ಹಿತವೂ ಇಲ್ಲ. ಮನೆಯೊಳಗಿನಿಂದ ಹೊರಬೀಳಲಿಕ್ಕೇ ಭಯ. ಹೊರಗೆ ಯಾವ ಶಬ್ದ ಕೇಳಿಸಿದರೂ ತನ್ನನ್ನು ಹಿಡೀಲಿಕ್ಕೆ ಯಾರೋ ಬಂದರೆಂದು ಹೆದರಿಕೆ. ಹುಚ್ಚನ ಹಾಗಾಗಿಬಿಟ್ಟ ಅಂದರೆ ನಂಬು. ಶಿಕ್ಷೆ ಪೂರ್ತಿ ಅನುಭವಿಸಿ ಬರುತ್ತಿದ್ದರೆ ಅಂಥಾ ಭಯ ಇರಲಿಕ್ಕಿಲ್ಲಷ್ಟೆ? ಧೈರ್ಯವಾಗಿ ಹೊಸ ಜೀವನವನ್ನು ಆರಂಭಿಸ ಬಹುದಿತ್ತಷ್ಟೆ? ಅದನ್ನೇ ಹೇಳಿದೆ ನಾನು. ಕೇಳಲೇ ಇಲ್ಲ. ಹತ್ತು ದಿನಗಳ ವರೆಗೆ ಮನೆಯೊಳಗೇ ಅಜ್ಞಾತವಾಸ ಮಾಡಿದ. ಹತ್ತನೇದಿನ ರಾತ್ರಿ ಅಕಸ್ಮಾತ್ತಾಗಿ ರಕ್ಷಕಭಟರು ಬಂದುಬಿಟ್ಟರು. ಹೆದರಿಹೋದ ನನ್ನಣ್ಣ ಆಲೋಚನೆ ಮಾಡದೆ ಮಾಳಿಗೇ ಮೇಲಿಂದ ಹಾರಿ ಕಲ್ಲಿನ ಮೇಲೆ ಬಿದ್ದು ತಲೆಯೊಡೆದುಕೊಂಡು ಎರಡು ದಿನ ನರಳಿ ಪ್ರಾಣಬಿಟ್ಟ" ಎಂದು ಹೇಳಿ ರಮೆ ಮತ್ತೆ ಕಣ್ಣೀರು ಒರೆಸಿ ಕೊಂಡಳು.

ಕಳ್ಳನಿಗೆ ಅವಳ ಮೇಲೆ ಕನಿಕರ ಉಂಟಾಯಿತು. "ಮೆಲ್ಲ ಮಾತಾಡು. ಯಾರಾದರೂ ಬಂದಾರು ಮತ್ತೆ!" ಎಂದನು ಕಳ್ಳ.

"ಅಡಿಗೆಯಾಯಿತು. ನೀನು ಅರ್ಧ ಊಟ ಮಾಡುವಾಗ ಬದನೇಕಾಯಿ ಪಲ್ಯವೂ ಆಗುತ್ತೆ" ಬಡಿಸಲೇ?" ಎಂದಳು.

ಕಳ್ಳನಿಗೆ ಊಟ ಬೇಕೆಂದಿದ್ದರೂ ಸಂದೇಹ ಪಡುವುದನ್ನು ನೋಡಿ, "ವಿಷ ಗಿಷ ಸೇರಿಸಿದ್ದೇನೆಂದು ಕೊಳ್ಳುವಿಯಾ? ನೀನೇ ನೋಡುತ್ತಾ ಇದ್ದೆಯಲ್ಲಾ? ನಾನು ಅತ್ತಿತ್ತ ಕದಲಲೂ ಇಲ್ಲ. ಯಾವ ಡಬ್ಬಿಯನ್ನೂ ಎತ್ತಲೂ ಇಲ್ಲ. ಯಾವ ಪದಾರ್ಥಕ್ಕೂ ಅಂಥಾದ್ದು ಏನೂ ಹಾಕಲಿಲ್ಲವಲ್ಲಾ!" ಎಂದಳು ರಮೆ.

ಅವಳು ಕಳ್ಳನ ಮುಂದೆ ಎಲೆಹಾಕಿ, ಅನ್ನ ಹುಳಿ ಬಡಿಸಿದಳು. ಅವನು ಊಟ ಮಾಡುವಾಗ ರಮೆ, "ನಿನ್ನನ್ನು ನೋಡಿದರೆ ಒಳ್ಳೆಯವನ ಹಾಗೇ ಕಾಣುವೆ. ಹಾಗಿರುವಾಗ ಸೆರೆಮನೆಗೆ ಹೇಗೆ ಬಿದ್ದೆಯಪ್ಪ?" ಎಂದಳು.

ಕಳ್ಳ ಹೀಗೆಂದ: "ನನ್ನ ತಂದೆತಾಯಿಗಳು ಯಾರೋ ನನಗಂತೂ ಗೊತ್ತಿಲ್ಲ, ಅಜ್ಜಿಯೇ ನನ್ನನ್ನು ಬೆಳೆಸಿ ದೊಡ್ಡದು ಮಾಡಿದಳು. ನನಗೇನೂ ಕಡಿಮೆಯಾಗಬಾರದೂ ಅಂತ ಅವಳು ತುಂಬಾ ಕಷ್ಟಪಟ್ಟು ನನ್ನಹೊಟ್ಟೆ ತುಂಬಿಸಿದಳು. ಅವಳು ಸತ್ತುಹೋದ ಮೇಲೆ ನನಗೆ ಕಷ್ಟ ಪ್ರಾರಂಭವಾಯಿತು. ನನಗೆ ಓದುಬರೆಹ ಬಾರದು. ಹಳ್ಳಿಯಲ್ಲಿ ಯಾವ ಕೆಲಸವೂ

ಸಿಕ್ಕವೆ ಪಟ್ಟಣಕ್ಕೆ ಬಂದೆ. ಯಾರೂ ನನಗೆ ಕೆಲಸ ಕೊಡುವವರಿಲ್ಲ. ಹಸಿವೆಯ ಕಾಟತಾಳಲಾಗದೆ, ಒಬ್ಬ ವ್ಯಾಪಾರದವನ ಕೈಯಲ್ಲಿದ್ದ ದುಡ್ಡಿನ ಚೀಲವನ್ನು ಎಳೆದುಕೊಂಡು ಓಡಿದೆ. ರಕ್ಷಕಭಟರು ಹಿಡಿದು ಬಿಟ್ಟರು. ಎರಡು ತಿಂಗಳು ಶಿಕ್ಷೆಬಿದ್ದಿತು."

"ಹಾಗಾದರೆ ಈಗ ತಪ್ಪಿಸಿಕೊಂಡು ಓಡಿ ಬಂದೆಯೇಕೆ ?" ಎಂದು ಕೇಳಿದಳು ರಮೆ.

"ಸೆರೆಶಾಲೆಯೊಳಗೆ ಸುಮ್ಮನಿರಲು ಬಿಡುವುದಿಲ್ಲ. ಏನೇನೋ ದಂಡಚಾಕರಿ ಮಾಡಿಸುತ್ತಾರೆ. ದೊಡ್ಡ ದೊಡ್ಡ ಅಡಿಗೆ ಮಾಡಬೇಕು. ತೋಟದ ಕೆಲಸ ಮಾಡ ಬೇಕು. ಬಟ್ಟೆ ಒಗೀಬೇಕು. ಚಾಪೆ ನೇಯಬೇಕು ಬಟ್ಟೆ ನೇಯಬೇಕು. ಅಂಗಿ ಹೊಲೀಬೇಕು. ಇಂಥ ಏನೇನೋ ಕೆಲಸಗಳು. ಸ್ವಲ್ಪ ನಿಧಾನ ಮಾಡಿದರೆ ಬೈಗಳು, ಹೊಡೆತ. ಸಾಕೋ ಸಾಕಾಯಿತು, ಅದಕ್ಕೆಲ್ಲ ತಾಳ್ಮೆ ನನಗಿಲ್ಲಪ್ಪ!" ಎಂದ ಕಳ್ಳ.

ರಮೆ ನಗುತ್ತ, "ಊರೊಳಗೆಲ್ಲಿಯೂ ಕೆಲಸ ಸಿಗಲಿಲ್ಲ ಅಂತ ತಾನೇ ಕಳ್ಳತನ ಮಾಡಿ ಸಿಕ್ಕಿಬಿದ್ದು ಸೆರೆಮನೆ ಸೇರಿದ್ದು ಅಂದೆಯಲ್ಲ? ಅಲ್ಲಿ ಕೆಲಸ ಹೆಚ್ಚಾಯಿತೆಂದು ಓಡಿಬಂದಿ ! ಓಡಿಬರುವ ಮೊದಲು ಮುಂದೆ ಹೀಗೆ ಮಾಡುತ್ತೇನೆ ಅಂತ ಒಂದು ಉದ್ದೇಶ ಇಲ್ಲದೆ ಇದ್ದೀತೆ? ಇನ್ನೇನು ಮಾಡುವುದು ಅಂತ ನಿನ್ನ ಉದ್ದೇಶ ?" ಎಂದು ಕೇಳಿದಳು.

"ಅದೆಲ್ಲಾ ಆಲೋಚಿಸಿಲ್ಲ. ಮುಖ್ಯವಾಗಿ ತಪ್ಪಿಸಿ ಕೊಳ್ಳಬೇಕೆಂದು ತೋರಿತು, ಬಂದುಬಿಟ್ಟೆ, ಅಷ್ಟೆ! ಏನೋ ಈಗ ಗೊತ್ತಾಗೋದೂ ಇಲ್ಲ" ಎನ್ನುತ್ತಾ ತಲೆ ತಗ್ಗಿಸಿದ ಕಳ್ಳ.

ರಮೆಯೇ ಮತ್ತೆ ಹೀಗೆಂದಳು :

"ನನಗೆ ಕಾಣುವುದೇನಂದರೆ, ಈಗಿನಿಂದ ನಿನಗೆ ನರಕಬಾಧೆ ಪ್ರಾರಂಭವಾಗುತ್ತದೆ. ನಿದ್ರಾಹಾರ ಗಳಿರಲಾರವು. ಭಯವು ನೆರಳಿನಹಾಗೆ ನಿನ್ನನ್ನು ಅಂಟಿಕೊಳ್ಳುತ್ತದೆ. ಈ ಸ್ಥಿತಿಯಲ್ಲಿ ಹೇಗೆ ಬದುಕುವಿ



ಹೇಳು. ಕೆಲಸವಾದರೂ ಹೇಗೆ ಸಿಗುತ್ತದೆ? ಸಿಕ್ಕಿದರೂ ಹೇಗೆ ಮಾಡುತ್ತಿ? ನಿನಗೆ ಈಗ ಸೆರೆಶಾಲೆಯಲ್ಲಿ ಇರುವ ಸ್ವೇಚ್ಛೆಕೂಡಾ ಇಲ್ಲದೆ ಹೋಯಿತು. ತಪ್ಪಿಸಿಕೊಂಡು ಬಂದಿರುವ ನೀನು ಅದೇ ಶಿಕ್ಷೆಯನ್ನು ಇನ್ನಷ್ಟು ಹೆಚ್ಚೇ ಮಾಡಿಕೊಂಡಿರುವಿ. ಅಷ್ಟೇ ! ಆ ಸೆರೆಶಾಲೆ ಯೊಳಗೇ ಇದ್ದು ಅಡಿಗೆ ಮಾಡುವುದೋ ಬಟ್ಟೆ ಹೊಲಿಯುವುದೋ, ತೋಟದಕೆಲಸವೋ ಮಾಡಿ ಪ್ರಾವೀಣ್ಯತೆ ಸಂಪಾದಿಸಿದ್ದರೆ ಬಿಡುಗಡೆಯಾಗಿ ಬಂದಮೇಲೆ ನಿನ್ನ ಬದುಕಿನ ದಾರಿ ಭಯವಿಲ್ಲದೆ ಸ್ವತಂತ್ರವಾಗುತ್ತಿತ್ತು. ಗೌರವ ದೊರೆಯುತ್ತಿತ್ತು. ತುಂಬಾ ಬುದ್ಧಿಗೇಡು ಕೆಲಸಮಾಡಿ ತಪ್ಪಿಸಿಕೊಂಡು ಬಂದಿರುವಿ, ಹೌದಾ ? ನನ್ನ ಅಣ್ಣನಿಗೂ ಹೀಗೆ ತಾನೇ ಆಯಿತು ! ಅನ್ಯಾಯವಾಗಿ ಸತ್ತುಹೋದ !"

ಕಣ್ಣೀರಿನೊಂದಿಗೆ ಹೊರಟ ಅವಳ ಮಾತುಗಳು ಕಳ್ಳನ ಕಣ್ಣುಗಳನ್ನು ತೆರೆಯಿಸಿದುವು. ತಾನು ಮಾಡಿದ ತಪ್ಪನ್ನು ತಿಳಿದನು. "ಹೌದೌದು. ನಿಜವೇ ! ತಪ್ಪು

ನಡೆದು ಹೋಯಿತು! ನೀನು ಹೇಳಿದಂತೆ ನಾನು ತುಂಬಾ ದುಡುಕಿಬಿಟ್ಟೆ. ಇನ್ನು ತಿದ್ದಿಕೊಳ್ಳುವುದು ಹೇಗೆ? ಶಿಕ್ಷೆ ಬೇರೆ ಹೆಚ್ಚಾಗುತ್ತದಲ್ಲಾ! ಏನು ಮಾಡಲಿ?" ಎಂದು ಅವನು ರಮೆಯನ್ನು ಕೇಳಿದನು.

"ಅದಕ್ಕೆ ವೇಳೆ ಮೀರಿ ಹೋಗಲಿಲ್ಲ. ನೀನಾಗಿ ಸೆರೆಮನೆಗೆ ಹೋಗಿ ಸಿಕ್ಕಿಬೀಳು. ಹಾಗೆ ಮಾಡಿದರೆ ಹೆಚ್ಚಿನ ದಂಡನೆ ಬೀಳದು, ನಿನ್ನನ್ನು ಮೆಚ್ಚಿಕೊಂಡಾರು. ಏನೋ ಸ್ವಲ್ಪ ಶಿಕ್ಷೆ ಬೆಳೆಯಬಹುದು. ಕೆಲಸ ಕಲಿತು ಕೊಳ್ಳಲಿಕ್ಕೆ ಅದು ಒಳ್ಳೇದೇ ಆಯಿತೆಂದು ತಿಳಿದರೆ ತನ್ನಂತೆ ಸಮಾಧಾನವಾಗುತ್ತದೆ!" ಎಂದಳು ರಮೆ.

ಕಳ್ಳ ಸಂತೋಷದಿಂದ, "ಸ್ವಂತ ತಂಗೀ ಹಾಗೆ ಒಳ್ಳೇ ಸಲಹೆ ಕೊಟ್ಟೆಯಮ್ಮಾ. ನಿನ್ನ ಋಣ ತೀರಿಸು ವಂಥಾದ್ದಲ್ಲ. ಬರುತ್ತೇನೆ." ಎಂದು ಎದ್ದು ಕೈ ತೊಳೆದು ಹೊರಟು ಹೋದನು.

ಕಳ್ಳ ಹೊರಟುಹೋದ ಸ್ವಲ್ಪ ಹೊತ್ತಿನ ಮೇಲೆ ಮತ್ತೆ ಬಾಗಿಲು ಬಡೆದ ಸಪ್ಪಳವಾಯಿತು. ಈ ಸಾರಿ ಬಂದವನು ರಮೆಯ ತಂದೆಯೇ.

"ಇಷ್ಟು ತಡವೇನು ಅಪ್ಪಾ? ಯಾವಾಗಲೂ ಬೇಗ ಬರುವಿರಲ್ಲಾ ಯಾವ ಕಳ್ಳನಾದರೂ ತೊಂದರೆ ಗಿಂದರೆ ಕೊಟ್ಟನೇನು?" ಎಂದು ಕೇಳಿದಳು ರಮೆ.

"ಸೆರೆಮನೆಯಿಂದ ಒಬ್ಬ ಕಳ್ಳ ತಪ್ಪಿಸಿಕೊಂಡು ಓಡಿದ. ಅದಕ್ಕೇ ಇಷ್ಟು ತಡವಾಯಿತು. ನನ್ನ ಕೆಲಸ ಕ್ಕೊಂದು ಹೊತ್ತು ಗೊತ್ತಿಲ್ಲ ಹೇಳು." ಎಂದ ಅವಳ ತಂದೆಯಾದ ಸೆರೆಮನೆಯ ಅಧಿಕಾರಿ.

"ನೀವು ಬಂದಿಗಳನ್ನು ಅಷ್ಟು ಚಂದಾಗಿ ನೋಡು ತ್ತೀರಿ ಅಂತಾಯಿತು, ಸೆರೆಮನೆಗಳು ಕೇವಲ ಖೈದಿ ಗಳನ್ನು ಶಿಕ್ಷಿಸಲು ಮಾತ್ರವೇ ಇರುವುದಲ್ಲವಷ್ಟೆ? ಅವರಲ್ಲಿ ಪರಿವರ್ತನೆ ಬರುವ ಹಾಗೆ ಮಾಡುವುದೂ ಸೆರೆಮನೆಯ ಕಾರ್ಯಗಳಲ್ಲವೆ? ನಿಮ್ಮ ಸೆರೆ ಮನೆ ಯಿಂದ ಓಡಿಹೋದ ಕಳ್ಳ ನಮ್ಮ ಮನೆಗೇ ಬಂದ. ನಾನು ಆ ಕಳ್ಳನೊಳಗಿದ್ದ ಕಳ್ಳನನ್ನು ಓಡಿಸಿಬಿಟ್ಟೆ. ಅದಕ್ಕಾಗಿ ಒಬ್ಬ ಅಣ್ಣನನ್ನು ಕೂಡಾ ಸೃಷ್ಟಿಮಾಡಿ ಕೊಂಡೆ" ಎಂದು ರಮೆ ನಡೆದ ಎಲ್ಲಾ ಸಮಾಚಾರ ವನ್ನೂ ತಂದೆಯೊಂದಿಗೆ ಹೇಳಿದಳು.

"ಭೇಷ್! ಮಗಳೇ! ಒಳ್ಳೇ ಕೆಲಸಮಾಡಿದಿ! ಸೆರೆಮನೆಯ ಅಧಿಕಾರಿಯ ಮಗಳೆಂದರೆ ನೀನೇ ಸರಿ. ಈಗಲೇ ಹೋಗಿ ಅವನು ಸೆರೆಶಾಲೆಗೆ ಹೋದನೋ ಇಲ್ಲವೋ ನೋಡಿ ಬಂದುಬಿಡುತ್ತೇನೆ" ಎನ್ನುತ್ತ ಅವನು ಎದ್ದನು.

"ಆ ಸಂದೇಹ ನಿಮಗೆ ಬೇಡ ಅಪ್ಪಾ. ಹೇಳಿದೆ ನಲ್ಲಾ, ಅವನೊಳಗಿದ್ದ ಕಳ್ಳ ಓಡಿಹೋಗಿದ್ದಾನೆ ಅಂತ? ಊಟಮಾಡಿ ನಿಧಾನವಾಗಿ ಹೋಗಬಹುದು" ಎಂದು ರಮೆ ತಂದೆಯ ಕೈ ಹಿಡಿದು ಒಳಗೆ ಕರೆದು ಕೊಂಡು ಹೋದಳು.





# ಪರಶುರಾಮ

೩

ವೀರಧೀರ ಶತಕೋಪಿಷ್ಠನಾದ ಪರಶುರಾಮನು ಕಾರ್ತವೀರ್ಯ ಮೊದಲಾದ ಕ್ಷತ್ರಿಯರಾಜರನ್ನು ಕೊಂದು ತಸು ಶಾಂತನಾಗಿ ನರ್ಮದಾ ನದಿಯಲ್ಲಿ ಸ್ನಾನ ಮಾಡಿದನು. ಅನಂತರ ಶಿವನ ದರ್ಶನ ಮಾಡಲು ಕೈಲಾಸಕ್ಕೆ ಹೋದನು. ಶಿವನ ಮಂದಿರದ ದ್ವಾರದಲ್ಲಿದ್ದ ವಿನಾಯಕನು ಅವನನ್ನು ಒಳಕ್ಕೆಬಿಡದೆ ತಡೆದನು. ಸ್ವಲ್ಪ ಹೊತ್ತು ಪರಶುರಾಮ ವಿನಾಯಕ ರೊಳಗೆ ವಾಗ್ವಾದ ನಡೆಯಿತು. ಕಡೆಗೆ ಕೈ ಕೈಕಲೆತು ಇಬ್ಬರೂ ಮುಷ್ಟಿ ಯುದ್ಧಕ್ಕೆ ಇಳಿದರು. ವಿನಾಯ ಕನು ಸೊಂಡಿಲಿನಿಂದ ಪರಶುರಾಮನನ್ನೆತ್ತಲು ಏಳು ಊರ್ಧ್ವ ಲೋಕಗಳೂ ಅವನಿಗೆ ಕಂಡುವು. ಆಗ ಪರಶುರಾಮನು ಕೊಡಲಿಯಿಂದ ವಿನಾಯಕನ ಒಂದು ದಂತವನ್ನು ಹೊಡೆದು ಮುರಿಯಲು, ವಿನಾಯಕನು ಏಕದಂತನಾದನು.

ಆ ಉಭಯರ ಗರ್ಜನೆಗಳಿಂದ ಶಿವಪಾರ್ವತಿಯರು ಹೊರಗೆಬಂದರು, ವಿನಾಯಕನ ಅವಸ್ಥೆಯನ್ನು ನೋಡಿ ಪಾರ್ವತಿಗೆ ಸಿಟ್ಟು ಬಂತು. "ನಮ್ಮಿಂದ ದೊಡ್ಡದೊಡ್ಡ ಉಪಕಾರ ಹೊಂದಿದವನು ಒಂದಿಷ್ಟೂ ಕೃತಜ್ಞತೆಯಿಲ್ಲದೆ ನಮ್ಮ ಮಗನ ದಂತ ಮುರಿದನೆ? ಇವನಿಗೆ ಪ್ರತೀಕಾರ ಮಾಡಲೇ ಬೇಕು !" ಎಂದಳು ಪಾರ್ವತಿ.

ಶಿವನು ಉಭಯ ಸಂಕಟದಲ್ಲಿ ಬಿದ್ದು, ವಿಷ್ಣುವಿನ ಕೃಷ್ಣಾವತಾರವನ್ನು ಧ್ಯಾನಿಸಿದನು. ವಿಷ್ಣು ಕೃಷ್ಣಾವ ತಾರದಿಂದ ಅಲ್ಲಿ ತೋರಿ, ಪಾರ್ವತಿಯ ಕೋಪವು ಶಾಂತವಾಗುವಂತೆ, "ಈ ರಾಮನು ಕೂಡಾ ನಿನ್ನ ಮಗನಂಥವನು ತಾನೆ? ತಾಯಿ ಇಬ್ಬರನ್ನೂ ಕ್ಷಮಿಸುವುದಿಲ್ಲವೆ? ಇದಕ್ಕೆಲ್ಲ ಮೂರನೇಯವರು ಬೇಕೇ? " ಎಂದು ಹೇಳಿದನು. ಪಾರ್ವತಿ ಸಮಾಧಾನ ಗೊಂಡು ಪರಶುರಾಮನ ಕುಶಲ ವಿಚಾರಿಸಿದಳು.

ಪರಶುರಾಮನು ಶಿವ ಪಾರ್ವತಿಯರಿಗೆ ನಮಸ್ಕರಿಸಿ ತನ್ನ ಮನೆಗೆ ಹಿಂದಿರುಗಿದನು. ಅವನು ತಂದೆ ಯೊಂದಿಗೆ ತಾನು ಮಾಡಿದ ಕ್ಷತ್ರಿಯ ವಧೆಯನ್ನು ಕುರಿತು ಹೇಳಿದನು. ಅದನ್ನು ಕೇಳಿ ಜಮದಗ್ನಿ, ಪರಶುರಾಮನು ಕ್ಷತ್ರಿಯ ವಧೆಯ ಪಾಪವನ್ನು ಕಳೆದುಕೊಳ್ಳಲಿಕ್ಕಾಗಿ, ಮಹೇಂದ್ರ ನಗರಕ್ಕೆ ಹೋಗಿ ತಪಸ್ಸು ಮಾಡಬೇಕೆಂದು ಹೇಳಿದನು.

ತಂದೆಯ ಆದೇಶದಂತೆ ಪರಶುರಾಮನು ಮಹೇಂದ್ರ ಪರ್ವತದಲ್ಲಿ ಸ್ವಲ್ಪಕಾಲ ತಪಸ್ಸು ಮಾಡಿದನು. ಅಷ್ಟರಲ್ಲಿ ಅವನಿಗೊಂದು ಕೆಟ್ಟ ಸಮಾಚಾರ ತಿಳಿಯಿತು. ಅದೇನೆಂದರೆ ಕಾರ್ತವೀರ್ಯಾಜುನನ ಮಗನೊಬ್ಬನು ಜಮದಗ್ನಿಯನ್ನು ಕೊಂದುಬಿಟ್ಟನಂತೆ. ತಾಯಿ ರೇಣುಕೆ ಗಂಡನೊಂದಿಗೆ ಸಹಗಮನ ಮಾಡಿದಳಂತೆ.

ಇದನ್ನು ಕೇಳಿ ಪರಶುರಾಮನಿಗೆ ಸಹಿಸಲಾಗದಷ್ಟು ಕೋಪಬಂತು. ಪ್ರಪಂಚದಲ್ಲಿರುವ ರಾಜರನ್ನೆಲ್ಲಾ ಕೊಂದು ಅವರ ರಕ್ತದಿಂದಲೇ ತಂದೆತಾಯಿಗಳಿಗೆ ತರ್ಪಣಕೊಡುವೆನೆಂದು ಶಪಥಮಾಡಿಕೊಂಡು, ತಪಸ್ಸಿನಿಂದೆದ್ದನು.

ಪರಶುರಾಮನ ಏಟುಗಳಿಂದ ಉಳಿದಿದ್ದ ಕಾರ್ತವೀರ್ಯನ ಮಕ್ಕಳೆಲ್ಲರೂ ಸತ್ತರು. ಆಮೇಲೆ ಕೂಡಾ ಕಣ್ಣಿಗೆ ಬಿದ್ದ ರಾಜರನ್ನೆಲ್ಲಾ ಕೊಂದನು. ಖಾಲಿಯಾದ ಕಾರ್ತವೀರ್ಯನ ನಗರಕ್ಕೇ ಬೆಂಕಿ ಹಚ್ಚಿದನು. ಆ ಬೆಂಕಿಯ ಜ್ವಾಲೆಯನ್ನು ನೋಡುತ್ತಾ ಪರಶುರಾಮನಿಗೆ ತೃಪ್ತಿಯಾಯಿತಂತೆ. ಅದರಿಂದಲೇ ಯಾವುದಾದರೂ ಸುಟ್ಟು ಉರಿದು ಹೋಗುವಾಗ "ಪರಶುರಾಮ ಪ್ರೀತಿಯಾಯಿತು" ಅನ್ನುತ್ತಾರೆ.

ಹೈಹಯ ವಂಶದವರನ್ನೆಲ್ಲಾ ಕೊಂದಾಯಿತು. ಅನೇಕಮಂದಿ ರಾಜರನ್ನೂ ಕೊಂದಾಯಿತು. ಪರಶುರಾಮನ ಕ್ರೋಧಾಗ್ನಿ ಸ್ವಲ್ಪ ಮಟ್ಟಿಗೆ ಶಾಂತವಾಗಿ ತಪಸ್ಸನ್ನು ಪೂರ್ತಿಗೊಳಿಸಬೇಕೆಂದು ತಪೋವನಕ್ಕೆ ಹೋದನು. ಅಲ್ಲಿ ಅವನು ತಪಸ್ಸು ಮಾಡುವುದನ್ನು ತಿಳಿದು ವಿಶ್ವಾಮಿತ್ರನ ಮೊಮ್ಮಗನಾದ ಪರಾವಸು ಎಂಬವನು ಅವನ ಬಳಿಗೆಬಂದು, "ಏನಯ್ಯಾ ಪರಶುರಾಮಾ! ರಾಜರಿಗೆ ಹೆದರಿ ಇಲ್ಲಿ ಕುಳಿತು ತಪಸ್ಸು ಮಾಡುವಿಯಾ?" ಎಂದು ಪರಶುರಾಮನನ್ನು ಅವಹೇಳನೆ ಮಾಡಿದನು.

ಪರಾವಸು ಅಷ್ಟರಲ್ಲಿ ತೃಪ್ತನಾಗದೆ, ಪರಶುರಾಮನು ಕೊಲ್ಲದೆ ಬಿಟ್ಟ ವೃದ್ಧರಬಳಿಗೂ, ಯುವಕರ ಬಳಿಗೂ ಹೋಗಿ ಪರಶುರಾಮನು ತಪಸ್ಸುಮಾಡುವ ಸ್ಥಳವನ್ನು ತಿಳಿಸಿ, ಹಗೆತೊಟ್ಟ ಅವರನ್ನು ಯುದ್ಧಕ್ಕೆ



ಕೆರಳಿಸಿದನು. ಅದರಿಂದ ತಪಸ್ಸು ಬಿಟ್ಟಿದ್ದ ಪರಶುರಾಮನು, ಮತ್ತೆ ತಿರುಗಿ ತಿರುಗಿ ಸಿಕ್ಕಿದ ಕ್ಷತ್ರಿಯರನ್ನೆಲ್ಲ ಕೊಂದುಹಾಕಿದನು.

ಅಷ್ಟಾದರೂ ಪರಶುರಾಮನ ಕೈಯಲ್ಲಿ ಎಲ್ಲಾ ಕ್ಷತ್ರಿಯರೂ ಸಾಯಲಿಲ್ಲ. ಕೆಲವರು ಹೆಂಗುಸರ ನಡುವಿನಲ್ಲಿಯೂ ಪಶುಗಳ ಮಂದೆಯಲ್ಲಿಯೂ ಹುದುಗಿ ತಲೆ ತಪ್ಪಿಸಿಕೊಂಡರು. ಅಂಥವರಿಗೆ ಮಕ್ಕಳು ಹುಟ್ಟಿ ದೊಡ್ಡವರೂ ಆದರು. ಅವರ ಸುಳಿವು ಗೊತ್ತಾದಾಗಲೆಲ್ಲಾ ಪರಶುರಾಮನು ಅವರನ್ನು ಹಿಡಿದು ಕೊಲ್ಲುತ್ತಾ, ಲೆಕ್ಕವಿಟ್ಟುಕೊಳ್ಳುತ್ತಾ, ಇಪ್ಪತ್ತೊಂದು ಸಾರಿ ತಿರುಗಿ ಕ್ಷತ್ರಿಯ ಸಂಹಾರಮಾಡುವೆನೆಂಬ ತನ್ನ ಮೊದಲಿನ ಪ್ರತಿಜ್ಞೆಯನ್ನು ಈಡೇರಿಸಿಕೊಂಡನು.

ಕ್ಷತ್ರಿಯರ ರಕ್ತವನ್ನೆಲ್ಲಾ ವ್ಯರ್ಥಮಾಡದೆ, ಕುರುಕ್ಷೇತ್ರದಲ್ಲಿದ್ದ ಐದು ಮಡುಗಳಲ್ಲಿ ತುಂಬಿಸಿ, ಅದರಿಂದಲೇ ತಂದೆಗೆ ತರ್ಪಣ ಕೊಟ್ಟನು. ಮಡುಗಳನ್ನು ಶ್ಯಮಂತಕ ಪಂಚಕವೆಂದು ಕರೆಯುತ್ತಾರೆ.

ಪರಶುರಾಮನು ಪಿತೃದೇವತೆಗಳಿಗೆ ತರ್ಪಣ ಕೊಡುವಾಗ ಅವರು ಅವನೊಂದಿಗೆ, "ಅಪ್ಪಾ, ನಿನಗಿನ್ನೂ ಪೂರ್ತಿ ಶಾಪಮುಕ್ತಿಯಾಗಿಲ್ಲ. ಅದಕ್ಕಾಗಿ ನೀನು ಯಾಗಮಾಡಬೇಕು" ಎಂದು ಹೇಳಿದರು.

ಪರಶುರಾಮನು ಮಹೇಂದ್ರ ನಗರಕ್ಕೆ ಹೋಗಿ ಮುನಿಗಳೊಡನೆ ಮಾತಾಡಿ, ಅವರ ಸಹಾಯದಿಂದ ಅಶ್ವಮೇಧಯಾಗವನ್ನು ಪ್ರಾರಂಭಮಾಡಿದನು. ಆ ಯಾಗವನ್ನು ನೋಡಲು ಅನೇಕ ಮುನಿಗಳು ಬಂದರು. ಅವರೊಳಗಿನ ಕೆಲವು ಮುನಿಗಳು, "ಗೋಕರ್ಣವು ಸಮುದ್ರಲ್ಲಿ ಮುಳುಗಿ ಹೋಗುತ್ತಾ ಇದೆ. ಅದನ್ನು ಪರಶುರಾಮನ ಹೊರತು ಬೇರೆ ಯಾರೂ ಕಾಪಾಡಲಾರರು" ಎಂದರು.

"ಅಯ್ಯಾ, ನಾನು ಪಿತ್ರಾಜ್ಞೆಯಂತೆ ಯಾಗ ದೀಕ್ಷೆಯಲ್ಲಿದ್ದೇನೆ. ಈಗ ಆಯುಧಗಳನ್ನು ಹೇಗೆ ಹಿಡಿಯಲಿ ?" ಎಂದನು ಪರಶುರಾಮ.

ಅದನ್ನು ಕೇಳಿ ಶುಷ್ಕನೆಂಬ ಮುನಿ ಮುಖ್ಯನೊಬ್ಬ, "ಆಯುಧ ಹಿಡಿಯುವುದರಲ್ಲಿ ತಪ್ಪೇನಿಲ್ಲ;



ಕೆಲಸ ಮುಗಿಸಿ ಬಂದು ಮತ್ತೆ ಯಾಗ ಮಾಡಲೂ ಬಹುದು" ಎಂದನು.

ಆಗ ಪರಶುರಾಮನು ಮುನಿಗಳ ಕೋರಿಕೆಯನ್ನು ಈಡೇರಿಸಲು ಗೋಕರ್ಣಕ್ಷೇತ್ರದ ಬಳಿಯಲ್ಲಿದ್ದ ಸಮುದ್ರ ತೀರಕ್ಕೆ ಹೋಗಿ, ಸಮುದ್ರಾಧಿಪತಿಯಾದ ವರುಣನನ್ನು ಕರೆದನು. ಎಷ್ಟು ಸಾರಿ ಕರೆದರೂ ವರುಣನು ಬರಲಿಲ್ಲ. ಕೂಡಲೇ ಪರಶುರಾಮನು ಆಗ್ನೇಯಾಸ್ತ್ರವನ್ನು ಬಿಲ್ಲಿಗೆ ಸಂಧಿಸಿ ನಾಣೆಳೆಯುವಾಗ ಅದರಿಂದ ಅಗ್ನಿಜ್ವಾಲೆಗಳು ಸಿಡಿಯತೊಡಗಿದುವು.

ಅದನ್ನು ನೋಡಿ ಸಮುದ್ರ ರಾಜನು ಹೆದರುತ್ತಾ ಬಂದು ಪರಶುರಾಮನಿಗೆ ಶರಣಾಗತನಾಗಿ, "ನಾನು ಎಷ್ಟು ದೂರ ಹಿಂದೆ ಹೋಗಬೇಕೆಂದು ಅಪ್ಪಣೆ ಕೊಡು, ಹೋಗುತ್ತೇನೆ" ಎಂದನು.

ರಾಮನು ತನ್ನ ಕೈಯಲ್ಲಿದ್ದ ಸ್ರುವವೆಂಬ ಕೊಡಲಿಯನ್ನು ಎತ್ತಿ ಸಮುದ್ರದ ಮೇಲೆ ಬಿಸುಟನು. ಅದು ಎಷ್ಟು ದೂರದಲ್ಲಿ ಬಿತ್ತೋ ಅಷ್ಟು ದೂರದವರೆಗೆ ಹಿಂದೆ ಹೋಗಲು ಹೇಳಿದನು. ಅದು ಎರಡು ಯೋಜನ ದೂರದಲ್ಲಿ ಹೋಗಿ ಬಿತ್ತು. ಸಮುದ್ರವು ಅಷ್ಟು ದೂರದವರೆಗೆ ಹಿಂದೆ ಹೋಯಿತು.

ಪರಶುರಾಮನು ಮಹೇಂದ್ರ ನಗರದಲ್ಲಿ ಆಶ್ರಮದಲ್ಲಿರುವಾಗ ಕರ್ಣನು ಅವನ ಬಳಿಗೆ ಬಂದು, ತಾನು ಬ್ರಾಹ್ಮಣನೆಂದು ಹೇಳಿಕೊಂಡು ವಿದ್ಯಾರ್ಥಿಯಾಗಿ ಸೇರಿದನು. ಪರಶುರಾಮನು ಅವನಿಗೆ ಬ್ರಹ್ಮಾಸ್ತ್ರವನ್ನೂ ಉಪದೇಶ ಮಾಡಿದನು.

ಒಂದುದಿನ ಪರಶುರಾಮನು ಕರ್ಣನ ತೊಡೆಯ ಮೇಲೆ ತಲೆಯಿಟ್ಟು ನಿದ್ದೆಯಲ್ಲಿರುವಾಗ, ಒಂದು ತುಂಬೀ ಹುಳು ಕರ್ಣನ ತೊಡೆಯನ್ನು ಕೊರೆಯತೊಡಗಿತು. ಅದರ ಗಾಯದಿಂದ ರಕ್ತ ಸುರಿಯುತ್ತಿದ್ದರೂ ಕರ್ಣನು ಕದಲದೆ ಸಹಿಸಿಕೊಂಡಿದ್ದನು.

ಆದರೆ ರಕ್ತವು ಪರಶುರಾಮನ ಶರೀರಕ್ಕೆ ಬಿದ್ದುದರಿಂದ ಅವನಿಗೆ ನಿದ್ರಾಭಂಗವಾಗಿ, "ಏನಿದು ? ಇಷ್ಟು ದೊಡ್ಡ ಗಾಯದಿಂದ ಹೀಗೆ ರಕ್ತ ಸುರಿಯುತ್ತಿದ್ದರೂ ಸಹಿಸಿಕೊಂಡಿದ್ದೆಯೆಂದರೆ, ನೀನು ಬ್ರಾಹ್ಮಣನೇ ಅಲ್ಲ. ಕ್ಷತ್ರಿಯನೇ ನಿಜ! ನನ್ನಿಂದ ವಿದ್ಯೆ ಕಲಿಯಲು ಸುಳ್ಳು ಹೇಳಿದೆಯಾ?" ಎಂದು ಮಹಾ ಕೋಪಿಷ್ಠನಾದ ಪರಶುರಾಮನು, ತಾನು ಅವನಿಗೆ ಕಲಿಸಿದ ಅಸ್ತ್ರ ವಿದ್ಯೆಗಳು ಸಮಯಕ್ಕೆ ಮರೆತು ಹೋಗಲೆಂದು ಶಪಿಸಿದನು. ಕ್ಷತ್ರಿಯರನ್ನೆಲ್ಲಾ ಕೊಂದು ಅವರ ರಾಜ್ಯಗಳನ್ನೆಲ್ಲಾ ವಶಪಡಿಸಿಕೊಂಡ ಪರಶುರಾಮನು, ತನಗೆ ಸಿಕ್ಕಿದ ಭೂಮಿಯನ್ನೆಲ್ಲಾ ಕಶ್ಯಪನಿಗೆ ದಾನಮಾಡಿಬಿಟ್ಟನು. ದಾನಮಾಡಿದ ಭೂಮಿಯಿಂದ ಪರಶುರಾಮನು ಹೊರಟುಹೋಗ ಬೇಕಾಯಿತು. ಪರಶುರಾಮನು ದಕ್ಷಿಣ ಸಮುದ್ರ ದಾಟಿ ಹೊರಟು ಹೋಗಿ ಚಿರಂಜೀವಿಯಾಗಿರುವನು.—(ಮುಗಿಯಿತು)





# ಇತಿಹಾಸದಿಂದ ಚರಿತ್ರೆಗೆ

ಭಾರತೀಯ ನಾಗರಿಕತೆ ಯಾವ ಕಾಲದ್ದೋ? ಈ ಸನಾತನ ಭೂಮಿಯಲ್ಲಿ ವಾಸಮಾಡಿದ ಮೊದಲನೇ ಮಾನವರು ಯಾರೋ? ಇಂತಹ ಪ್ರಶ್ನೆಗಳಿಗೆ ಸರಿಯಾದ ಉತ್ತರ ಸಿಗಲಾರದು. ಅನೇಕ ನಾಗರಿಕತೆಗಳು ಪ್ರಳಯಗಳಲ್ಲಿ ಹೊಡೆದು ಹೋಗಿವೆಯೆಂದು ಪ್ರತೀತಿ.

ಬಹು ದೀರ್ಘ ಕಾಲಾವಧಿಯಲ್ಲಿ ಮಹರ್ಷಿಗಳು ರಚಿಸಿದ ವೇದಗಳಿಂದಾಗಿ ನಮಗೊಂದು ನಾಗರಿಕತೆ ಇದ್ದಿತೆಂದು, ದೇವರು, ಜ್ಞಾನ ಅಮರತ್ವಗಳಂತಹವನ್ನು ಕುರಿತು ಅನ್ವೇಷಣೆ ನಡೆದಿದೆಯೆಂದು ಗೊತ್ತಾಗುತ್ತದೆ.






ಹರಪ್ಪಾ. ಮೊಹೆಂಜದಾರೋಗಳಂತಹ ಪ್ರದೇಶಗಳಲ್ಲಿ ಮಹಾ ನಗರಗಳ ಅವಶೇಷಗಳು, ಜನರು ವಾಸಿಸಿದ ಮನೆ ಮಠಗಳ ಶಿಥಿಲಗಳು ಹೊರಬಿದ್ದಿವೆ. ಅವುಗಳಿಗೆ ಐದು ಸಾವಿರಕ್ಕೂ ಹೆಚ್ಚಿನ ವಯಸ್ಸಾಗಿವೆ. ಪ್ರಪಂಚದಲ್ಲಿ ಬೇರೆಲ್ಲಿಯೂ ಆ ಕಾಲದಲ್ಲಿ ಅಂತಹ ನಗರಗಳಿರಲಿಲ್ಲ.



ಒಂದು ಕಾಲದಲ್ಲಿ ಭಾರತಿಯರು ಸಾಹಸೋಪೇತವಾದ ಸಮುದ್ರ ಯಾನಗಳನ್ನು ಮಾಡಿದ್ದಾರೆ. ಅವರು ದೂರ ದೂರ ಪ್ರಾಂತಗಳಿಗೆ ತಮ್ಮ ವ್ಯಾಪಾರವನ್ನೂ ಸಂಸ್ಕೃತಿಯನ್ನೂ ಹೊಂದಿಸಿದ್ದಾರೆ. ನಾಗರಿಕತೆಯ ಪ್ರಾರಂಭ ದಶೆಯಲ್ಲಿ ಭಾರತಿಯರು ದಕ್ಷಿಣ ಅಮೆರಿಕದ ವರೆಗೂ ಹೋಗಿರುವರೆಂದು ಕೆಲವರು ಪಂಡಿತರ ಅಭಿಪ್ರಾಯ.

ಅತ್ಯಂತ ಪ್ರಾಚೀನ ನಾಗರಿಕತೆಗಳಲ್ಲಿ ಒಂದಾದ ಮೊಸಾಪೊಟಾಮಿಯಾದಲ್ಲಿ ಭಾರತೀಯರ ಮುದ್ರಿಕೆಗಳೂ, ಮೊಹೆಂಜದಾರೋನಲ್ಲಿ ಮೊಸಾಪೊಟಾಮಿಯಾ ಮುದ್ರಿಕೆಗಳೂ ಲಭಿಸಿದುದರಿಂದ, ಆ ಉಭಯ ದೇಶಗಳ ಮಧ್ಯೆ ಬರುಹೋಗುವಿಕೆಗಳಿದ್ದಂತೆ ಸ್ಪಷ್ಟವಾಗುತ್ತದೆ.





ಭಾರತೀಯ ವಿಜ್ಞಾನಿಗಳು ಅನೇಕ ದೇಶಗಳಿಗೆ ಹೋಗಿ ಅಲ್ಲಿಯ ವಿಜ್ಞಾನಿಗಳನ್ನು ಸಂಧಿಸಿದ್ದಾರೆ. ಒಬ್ಬ ಭಾರತೀಯನು ಕ್ರಿ. ಪೂ. ೫ನೆಯ ಶತಾಬ್ದದಲ್ಲಿ ದೊಡ್ಡ ಗ್ರೀಕು ತತ್ವವೇತ್ತನಾದ ಸೊಕ್ರೆಟೀಸನನ್ನು ಕಲೆತುಕೊಂಡ ಸಂಗತಿ ನಮಗೆ ಗೊತ್ತಾಗಿದೆ.



ಭಾರತ ದೇಶದಲ್ಲಿ ಅನೇಕ ಆಧ್ಯಾತ್ಮಿಕ ಮತ ವಾದಗಳು ಹುಟ್ಟಿದುವು. ವೇದಗಳೂ, ಉಪನಿಷತ್ತುಗಳೂ ಋಷಿಗಳಿಂದ ರಚಿತವಾದ ಅನಂತರ, ಕ್ರಿ. ಪೂ. ೬ ನೇ ಶತಾಬ್ದದಲ್ಲಿ ಜೈನಮತ ಸ್ಥಾಪಕನಾದ ಮಹಾವೀರ ಜಿನನು ಬಂದನು.

ಗೌತಮಬುದ್ಧನು ಕೂಡಾ ಕ್ರಿ. ಪೂ. ೬ ನೇ ಶತಾಬ್ದದಲ್ಲೇ ಹುಟ್ಟಿದವನು. ಮೋಕ್ಷ ಮಾರ್ಗವನ್ನು ಅನ್ವೇಷಿಸುತ್ತ ಅವನು ರಾಜ ಸುಖ ವೈಭವಗಳನ್ನೆಲ್ಲಾ ಬಿಟ್ಟು, ತಪಸ್ಸುಮಾಡಿ ಸತ್ಯವನ್ನು ತಿಳಿದುಕೊಂಡನು.





ಪುರಾಣಗಳಲ್ಲಿ ನಮಗೆ ಬಹಳಮಂದಿ ರಾಜರು ಕಂಡುಬರುತ್ತಾರೆ. ಚರಿತ್ರ ಕಾಲದಲ್ಲಿ ನಂದ ವಂಶವನ್ನು ಸ್ಥಾಪಿಸಿದ ಮಹಾಪದ್ಮನಂದನು ಕ್ರಿ.ಪೂ. ೪ ನೆಯ ಶತಾಬ್ದದಲ್ಲಿ ಕಳಿಂಗದಿಂದ ಪಂಜಾಬಿನ ವರೆಗೆ ವಿಸ್ತೃತ ದೇಶವನ್ನು ಪಾಲಿಸುತ್ತಿದ್ದನೆಂದು ನಮಗೆ ಗೊತ್ತಾಗಿದೆ.

ರಾಜರ ಪಾಲನೆಗೆ ಬದಲಾಗಿ ಪ್ರಜೆಗಳಿಂದ ಆರಿಸಲ್ಪಟ್ಟ ಸಮಿತಿಗಳಿಂದ ಪರಿಪಾಲನೆ ನಡೆದ ಪ್ರದೇಶಗಳು ಕೂಡಾ ಇದ್ದುವು. ಅವುಗಳನ್ನು ಗಣತಂತ್ರ ರಾಜ್ಯಗಳೆಂದು ಕರೆಯುವರು. ಪ್ರಾಚೀನ ಭಾರತದಲ್ಲಿ ಅನೇಕ ವಿಭಾಗಗಳಿದ್ದರೂ, ಸಾಂಸ್ಕೃತಿಕ ಸಮೈಕ್ಯತೆಯೂ ಬೆಸೆದುಕೊಂಡಿದ್ದಿತು.





ಭಾರತದ ಖ್ಯಾತ ನಾಮವು ವಿದೇಶೀಯ ರಾಜರನ್ನು ದಾಳಿ ಮಾಡುವಂತೆ ಪ್ರೇರೇಪಿಸುತ್ತಿತ್ತು. ಭಾರತ ಭೂಭಾಗದ ಮೇಲೆ ಮೊತ್ತಮೊದಲು ದಂಡೆತ್ತಿ ಬಂದವನು ಪರ್ಷಿಯಾ ರಾಜನಾದ ಸೈರಸ್. ಕ್ರಿ. ಪೂ. ೬ ನೇ ಶತಾಬ್ದದಲ್ಲಿ ಅವನು ವಾಯುವ್ಯ ಪ್ರಾಂತದಲ್ಲಿರುವ ಗಾಂಧಾರದೇಶವನ್ನು ಜಯಿಸಿದನು.

ಆಮೇಲೆ ಎರಡು ಶತಮಾನಗಳ ಮೇಲೆ ಗ್ರೀಸು ದೇಶಕ್ಕೆ ಸೇರಿದವನಾದ ಅಲೆಗ್ಝಾಂಡರ್, ಪರ್ಷಿಯಾವನ್ನು ಜಯಿಸಿ, ಭಾರತದೇಶದೊಳಗೆ ಪ್ರವೇಶಿಸಬೇಕೆಂದು ಕನಸು ಕಂಡನು. ಏಕೆಂದರೆ ಭಾರತ ದೇಶದ ಪುಟ್ಟದೊಂದು ಭಾಗವನ್ನು ಜಯಿಸಿಕೊಂಡುದಕ್ಕೇ ಪರ್ಷಿಯಾ ತುಂಬಾ ಹೆಮ್ಮೆಪಟ್ಟಿತ್ತು!





# ಅರ್ಧ ಬೆಲೆ

ಒಂದು ಊರಿನಲ್ಲಿ ರಂಗಣ್ಣನೆಂಬೊಬ್ಬ ರೈತನಿದ್ದನು. ಅವನಿಗಿರುವುದೆಲ್ಲಾ ಎರಡು ಎಕರೆ ಹೊಲ ಮತ್ತು ಅಜ್ಜನಕಾಲದ ಹಳೇ ಮನೆ ಮಾತ್ರವೇ.

ಈಗ ರಂಗಣ್ಣನ ಮಗಳಿಗೆ ಮದುವೆಯ ವಯಸ್ಸು ಬಂದಿತ್ತು. ಮಗಳನ್ನು ದೊಡ್ಡ ಮನೆತನದ ವರನಿಗೆ ಕೊಡಬೇಕೆಂಬುದು ರಂಗಣ್ಣನ ಉದ್ದೇಶ. ಅಲ್ಲಿ ಇಲ್ಲಿ ವರಾನ್ವೇಷಣೆಮಾಡುತ್ತಾ ಕಡೆಗೆ ಒಂದು ಸಂಬಂಧವು ರಂಗಣ್ಣನಿಗೆ ಹಿಡಿಸಿತು. ಆದರೆ ಅವರು ಮೂರು ಸಾವಿರ ವರದಕ್ಷಿಣೆ ಬೇಕೆಂದು ಕೇಳುತ್ತಿದ್ದಾರೆ. ತನ್ನ ಹೊಲ ಮನೆಗಳನ್ನೇ ಅಡವು ಹಾಕಿ ಸಾಲ ಹುಟ್ಟಿಸಿಕೊಳ್ಳಬೇಕೆಂದು ತನಗೆ ತಿಳಿದವರನ್ನೆಲ್ಲಾ ವಿಚಾರಿಸಿ ನೋಡಿದನು. ಅವನ ಹೊಲದ ಬಹುಭಾಗ ಬೆಟ್ಟುಗದ್ದೆಗಳು. ಮನೆಯೋ ಹಳೆಯದು.

ಕಡೆಗೆ ಆ ಊರಿನೊಳಗಿದ್ದ ಬಡ್ಡಿಯ ಲೇವಾದೇವಿ ನಡೆಸುವ ವೀರಯ್ಯನ ಹತ್ತಿರ ಹೋಗಿ ತನ್ನ ವಿಚಾರ ಹೇಳಿದನು. ವೀರಯ್ಯ ಅಡವಿನ ಮಾತಿಗೆ ಒಪ್ಪದೆ, ಅರ್ಧ ಬೆಲೆಗೆ ಎಲ್ಲವನ್ನೂ ತನಗೆ ಕ್ರಯ ಪತ್ರ ಬರೆದು ಕೊಡಬೇಕೆಂದೇ ಕೇಳಿದನು. ವೀರಯ್ಯನ ಸಮಾಚಾರ ಎಲ್ಲರಿಗೂ ಗೊತ್ತಿತ್ತು. ಅವನದು ಜಿರಳೇ ಗುಣ. ಸಾಲ ಕೊಡುವವರೆಗೆ ಒಳ್ಳೆಯವನಾಗಿದ್ದು, ಸಾಲ ಮುಗಿಯುವವರೆಗೂ ಬಡ್ಡಿಯನ್ನು ಹೀರುತ್ತಾ ಇರುವನು. ಯಾರಿಗೂ ಬೇಡದಿದ್ದ ರಂಗಣ್ಣನ ಹೊಲ ಮನೆಗಳನ್ನು ಅಗ್ಗದಲ್ಲಿ ಒಳಸೇರಿಸಿಕೊಳ್ಳಬೇಕೆಂದು ಈ ಹಂಚಿಕೆ ಹಾಕಿದ್ದಾನೆ. "ನಾನು ಅರ್ಧ ಬೆಲೆಗೆ ನಿನ್ನ ಹೊಲವನ್ನು ಕೊಂಡುಕೊಳ್ಳುವುದು ಏಕೆಂದರೆ, ನಿನ್ನಂಥವನಿಂದ ಬಡ್ಡಿ ವಸೂಲು ಮಾಡಬಾರದೆಂತಲೇ. ಅದಕ್ಕೇ ಹೀಗೆ ಹೇಳಿದೆ. ಬೇಕಾದರೆ ಒಂದು ಮಾಡು. ನಿನಗೆ ಯಾವಾಗ ತಿರಿಗಿಕೊಂಡುಕೊಳ್ಳಬೇಕೆಂದು ತೋರುವುದೋ ಆಗ ಅರ್ಧ ಬೆಲೆಗೇ ಕೊಟ್ಟುಬಿಡುತ್ತೇನೆ." ಎಂದನು ವೀರಯ್ಯ.

ಈ ಮಾತಿನಲ್ಲಿ ಏನೋ ಮೋಸವಿರುವಂತೆ ರಂಗಣ್ಣನಿಗೆ ಸಂದೇಹವಾಗಿ, ಮರುದಿನ ಹೇಳುತ್ತೇನೆಂದು ಹೇಳಿ ಹೊರಟನು. ಮರುದಿನ ತಾನೇ ರಂಗಣ್ಣನ ಮನೆಗೆ ಬರುವುದಾಗಿ ವೀರಯ್ಯ ಹೇಳಿದ.

ತರುವಾಯ ರಂಗಣ್ಣನು ಗ್ರಾಮದ ಕರಣಿಕರಾದ ಸೂರಯ್ಯನವರ ಬಳಿಗೆ ಹೋಗಿ ವೀರಯ್ಯನ ಸಮಾಚಾರವನ್ನೆಲ್ಲಾ ಹೇಳಿ, ಏನು ಮಾಡಬೇಕೆಂದು ಕೇಳಿದನು. ಸೂರಯ್ಯನು ತಲೆದೂಗುತ್ತ, ವೀರಯ್ಯನ

ಷೇಕ್ ಗಾಲಿಬ್

ದುರಾಲೋಚನೆಗೆ ಬುದ್ಧಿ ಕಲಿಸಲು ಇದೇ ತಕ್ಕ ಸಮಯವೆಂದುಕೊಂಡನು.

"ರಂಗಣ್ಣಾ, ವೀರಯ್ಯನ ಗುಟ್ಟು ಏನು ಗೊತ್ತಾ? ನಿನ್ನ ಹೊಲ ಮನೆಗಳ ಬೆಲೆ ಸುಮಾರು ಇಪ್ಪತ್ತು ಸಾವಿರವಾದೀತು. ಅದನ್ನು ಎಂಟು ಹತ್ತು ಸಾವಿರಕ್ಕೇ ಹೊಡೆದುಬಿಡೋಣವೆಂದು ಅವನು ಉಪಾಯ ಮಾಡಿ ಕ್ರಯಪತ್ರ ಬರೆಯಲು ಹೇಳುತ್ತಾನೆ. ನೀನು ನಿನ್ನ ಮಗಳಿಗೆ ಮದುವೆಮಾಡಿದ ಮೇಲೆ ಮತ್ತೆ ಅವನು ಕೊಟ್ಟ ಹಣವನ್ನು ಸೇರಿಸಿ ತಿರುಗಿ ಹೊಲ ಮನೆಗಳನ್ನು ಕೊಂಡುಕೊಳ್ಳುವುದು ಸಾಧ್ಯವಾಗದ ಮಾತು ಅಂತ ಮಾಡಿದ್ದಾನೆ. ಆದ್ದರಿಂದ ನೀನು ನಾನು ಹೇಳಿದ ಹಾಗೆ ಮಾಡು. ನಿನ್ನ ಮಗಳ ಮದುವೆಯೂ ಆಗುತ್ತದೆ. ವೀರಯ್ಯನ ರೋಗವೂ ವಾಸಿಯಾಗುತ್ತದೆ" ಎಂದು ಸೂರಯ್ಯ ತನ್ನ ಆಲೋಚನೆಯನ್ನು ರಂಗಣ್ಣನಿಗೆ ಹೇಳಿದನು. ರಂಗಣ್ಣನಿಗೆ ಧೈರ್ಯ ಬಂತು, ಮಾರಣೇ ದಿನ ರಂಗಣ್ಣ ಏನೋ ಆಲೋಚನೆ ಮಾಡುವವನಂತೆ ಮನೆಯ ಜಗಲಿಯಲ್ಲಿ ಕುಳಿತಿದ್ದನು.

ಆಗ ವೀರಯ್ಯ ಅಲ್ಲಿಗೆ ಬಂದು, "ಏನು ಆಲೋಚನೆ ಮಾಡಿದಿ ರಂಗಣ್ಣಾ?" ಎನ್ನುತ್ತ ಅಲ್ಲಿ ಕುಳಿತನು. ಅದೇ ಸಮಯಕ್ಕೆ ಮನೆಯ ಮುಂದೆ ಎತ್ತಲೋ ಹೋಗುವವರಂತೆ ನಡೆಯುವ ಕರಣಿಕ ಸೂರಯ್ಯ ನನ್ನು ನೋಡಿ, "ಓಹೋಯ್! ಸೂರಯ್ಯನವರೇ! ಸಮಯಕ್ಕೆ ಬಂದಿರಲ್ಲಾ! ಬನ್ನಿ, ಸಾಕ್ಷಿ ಬರವಣಿಗೆಗೆ ತಕ್ಕವರೇ ನೀವು. ರಂಗಣ್ಣನ ಮಗಳ ಮದುವೆಗೆ ಒಳ್ಳೇ ಶಕುನ ಕಾಣುತ್ತೆ" ಎಂದನು ವೀರಯ್ಯ.

ಸೂರಯ್ಯ ಅಲ್ಲಿಗೆ ಬಂದು ಕುಳಿತು, "ಏನು ವಿಷಯ?" ಎಂದು ವೀರಯ್ಯನನ್ನು ಕೇಳಿದರು.

ರಂಗಣ್ಣ ಕಂಠ ಸರಿಮಾಡಿಕೊಂಡು, "ಮತ್ತೇನಿಲ್ಲ ಕರಣೀಕರೇ, ವೀರಯ್ಯ ನನ್ನ ಹೊಲ ಮನೆಗಳನ್ನು ಅರ್ಧ ಬೆಲೆಗೆ ಕೊಂಡುಕೊಳ್ಳುವುದಾಗಿ ಹೇಳುತ್ತಾರೆ. ಅಡವೂ, ಸಾಲ, ಬಡ್ಡೀ ಈ ಯಾವ ತಂಟೆಯೂ ಬೇಡಾ ಅಂತ ಹಾಗೆ ಹೇಳುತ್ತಾರಂತೆ. ಮತ್ತೆ ಅರ್ಧ ಬೆಲೆ ನಾನು ಯಾವಾಗ ತಿರುಗಿಕೊಟ್ಟರೂ ಕೊಂಡು ಕೊಂಡ ಹೊಲ ಮನೆಗಳನ್ನು ನನಗೇ ಕೊಟ್ಟುಬಿಡುತ್ತಾ



ರಂತೆ. ಆದ್ದರಿಂದ ನನ್ನ ಯಾವತ್ತೂ ಆಸ್ತಿ ಇಪ್ಪತ್ತು ಸಾವಿರ ಅಂದುಕೊಂಡು ಅದರ ಅರ್ಧಕ್ಕೆ ವೀರಯ್ಯನಿಗೆ ಮಾರೋಣವೆಂದಿದ್ದೇನೆ. ಒಪ್ಪುವಿರಾ ವೀರಯ್ಯನವರೇ ?" ಎಂದನು ರಂಗಣ್ಣ.

ವೀರಯ್ಯನಿಗೆ ತನ್ನ ಹೋಳಿಗೆ ತುಪ್ಪದಲ್ಲೇ ಬಿದ್ದಷ್ಟು ಆನಂದವಾಯಿತು. ರಂಗಣ್ಣನ ಹೊಲಗಳಿಗೆ ಮಣ್ಣು ಹೊರಿಸಿ ಈಟು ಹಾಕಿಸಿ, ಮನೆಯನ್ನೂ ಸ್ವಲ್ಪ ಆಧುನಿಕಗೊಳಿಸಿದರೆ ಇಪ್ಪತ್ತೈದು ಮೂವತ್ತು ಸಾವಿರದ ಬೆಲೆಯದಾದೀತು! ಅದೀಗ ಹತ್ತೇ ಸಾವಿರಕ್ಕೆ ತನ್ನದಾಗಿಬಿಟ್ಟರೆ ರಂಗಣ್ಣ ಈ ಜನ್ಮದಲ್ಲಿ ಹತ್ತು ಸಾವಿರ ಕೊಟ್ಟು ವಾಪಾಸುಪಡೆಯಲಾರ!

ಹೀಗೆ ರಂಗಣ್ಣ ತನ್ನ ಹೊಲ ಮನೆಗಳನ್ನು ಅರ್ಧ ಬೆಲೆ ಅಂದರೆ ಹತ್ತು ಸಾವಿರಕ್ಕೆ ತನಗೆ ಮಾರಿದುದಾಗಿಯೂ, ಅವನು ಮತ್ತೆ ಅರ್ಧ ಬೆಲೆಯನ್ನು ಕೊಟ್ಟರೆ ತನ್ನಿಂದ ಹಿಂದಿರುಗಿ ಪಡೆಯಬಹುದೆಂತಲೂ ಕರಣೀಕ ಸೂರಯ್ಯರಿಂದಲೇ ಬರೆಯಿಸಿ, ಅದರ ಮೇಲೆ ನಾಲ್ಕು ಜನರ ಸಾಕ್ಷಿಗಳನ್ನೂ ಹಾಕಿಸಿ ವೀರಯ್ಯನು ಎಲ್ಲರ ಇದಿರಿನಲ್ಲಿ ರಂಗಣ್ಣನಿಗೆ ಹತ್ತು ಸಾವಿರವನ್ನು ಕೊಟ್ಟನು. ಸೂರಯ್ಯ ಕೂಡಾ ಅದರಲ್ಲಿ ರುಜುವುಮಾಡಿ, ಆ ಪತ್ರವನ್ನು ತನ್ನಲ್ಲೇ ಇಟ್ಟುಕೊಂಡರು. ಮದುವೆಯಾದ ಮೇಲೆ ರಿಜಿಸ್ಟ್ರಿ ಮಾಡುವುದಾಗಿ ಮಾತೂ ಆಯಿತು.

ಎಲ್ಲರೂ ಹೋದ ಮೇಲೆ ಮದುವೆಯಾದ ಮೇಲೆ ಮನೆ ಬಿಟ್ಟುಕೊಡುವೆನೆಂದು ರಂಗಣ್ಣ ಹೇಳಿದನು. ಆಗಲಿ ಎಂದು ಆಗ ವೀರಯ್ಯನು ಹೊರಟು ಹೋದರೂ, ರಂಗಣ್ಣನ ಮನೆಯಲ್ಲಿ ಮದುವೇ ಸಿದ್ಧತೆಗಳೆಲ್ಲಾ ನಡೆದು ಹತ್ತುಜನರು ಸೇರಿದ್ದಾಗ, ವೀರಯ್ಯನು ನಾಲ್ಕಾರು ಕೆಲಸದವರೊಂದಿಗೆ ಅಲ್ಲಿಗೆ ಬಂದು, "ಏನು ರಂಗಣ್ಣಾ, ಮನೆ ನನಗೆ ಮಾರಿದ ಮೇಲೆ ಇನ್ನೂ ಇಲ್ಲೇ ಇರುವಿಯಾ? ಇಲ್ಲಿ ಮದುವೇ ಮಾಡಿಸಲು ಸಾಧ್ಯವಿಲ್ಲ. ಈ ದಿನ ಈ ಮನೆಯ ದುರಸ್ತಿಗೆ ಪ್ರಾರಂಭಿಸ ಬೇಕೆಂದಿದ್ದೇನೆ. ಇಲ್ಲಿಯೇ ಮದುವೆಮಾಡ ಬೇಕೆಂದಿದ್ದರೆ ಪ್ರತ್ಯೇಕ ಬಾಡಿಗೆ ಕೊಡ ಬೇಕು. ಇಲ್ಲದಿದ್ದರೆ ನನ್ನ ಹಣ ನನಗೆ ಕೊಟ್ಟು ಮನೆ



ಸ್ವಾಧೀನ ಮಾಡಿಕೋ." ಎಂದು ತಗಾದೆಗಿಳಿದನು. ರಂಗಣ್ಣ ಅಲ್ಲಿಯೇ ಕುಳಿತಿದ್ದ ಕರಣೀಕ ಸೂರಯ್ಯ ನನ್ನು ನೋಡಿದನು. "ನಾನು ಹೇಳಿದ ಹಾಗೆಯೇ ಮಾಡು" ಎಂದು ಸೂರಯ್ಯ ಅವನಿಗೆ ಸೈಗೆತೋರಿ ದರು.. ರಂಗಣ್ಣ ಎದ್ದು ಒಳಗೆಹೋಗಿ ಐದು ಸಾವಿರ ರೂಪಾಯಿಗಳನ್ನು ತಂದು ವೀರಯ್ಯನ ಕೈಗೆ ಕೊಟ್ಟು. "ಇಕೊಳ್ಳಿ, ನಿಮಗೆ ಕೊಡಬೇಕಾದ ಬೆಲೆ. ಈಗ ಈ ಹೊಲ ಮನೆಯೆಲ್ಲವನ್ನೂ ನಾನು ನಿಮ್ಮಿಂದ ವಾಪಾಸುಪಡೆದುಕೊಂಡಿದ್ದೇನೆ. ಇನ್ನು ಈ ಮನೆ ನನ್ನದು. ನೀವು ಅತಿಥಿಗಳಾದ್ದರಿಂದ ವಧೂವರನ್ನು ಆಶೀರ್ವಾದಿಸಿ ಭೋಜನೋಪಚಾರ ಸ್ವೀಕರಿಸಬೇಕು" ಎಂದನು.

ವೀರಯ್ಯನ ಬುದ್ಧಿಗೆ ಮಂಕುಬಡಿದಂತಾಯಿತು. "ಏನಿದು ರಂಗಣ್ಣಾ? ನನ್ನನ್ನು ಆಟವಾಡಿಸುವೆಯಾ? ನೀನು ಕೊಟ್ಟದ್ದು ಐದು ಸಾವಿರತಾನೆ! ಇನ್ನೊಂದೈದು ಸಾವಿರ ಎಲ್ಲಿದೆ? ತಾಮತ್ತೆ! ಅಲ್ಲವೇ ಕರಣಿಕರೇ?" ಎಂದು ಸೂರಯ್ಯನನ್ನು ನೋಡಿದನು.

"ನಾನೇನುತಾನೇ ಹೇಳಿಯೇನು? ನೀವು ಹೇಳುವುದು ಕ್ರಯ ಪತ್ರಕ್ಕೆ ವಿರೋಧದ ಮಾತು. ರಂಗಣ್ಣ ಆ ಪತ್ರಕ್ಕೆ ಸರಿಯಾದ ಅರ್ಥವನ್ನೇ ಅಮಲು ಪಡಿಸಿದ್ದಾನೆ" ಎಂದು ಜೇಬಿನಿಂದ ಪತ್ರವನ್ನು ತೆಗೆದರು ವೀರಯ್ಯ.

"ಮನಸ್ಸು ಕೊಟ್ಟು ಕೇಳಿರಯ್ಯ. ರಂಗಣ್ಣ ಇಪ್ಪತ್ತು ಸಾವಿರಬೆಲೆಯ ಹೊಲಮನೆಗಳನ್ನು ನಿಮಗೆ ಅರ್ಧಬೆಲೆಗೆ ಅಂದರೆ ಹತ್ತು ಸಾವಿರಕ್ಕೆ ಮಾರಿದ್ದಾನೆ. ಅಂದರೆ ನೀವು ಅದಕ್ಕೆ ಬೆಲೆಕಟ್ಟಿ ಕೊಂಡುಕೊಂಡದ್ದು ಹತ್ತು ಸಾವಿರಕ್ಕೇನೆ. ರಂಗಣ್ಣ ನೀವು ಕಟ್ಟಿದುದರ ಅರ್ಧಬೆಲೆಯನ್ನು ನಿಮಗೆ ಕೊಟ್ಟರೆ ಎಲ್ಲವನ್ನೂ ತಿರುಗಿ ಕೊಡುವುದಾಗಿ ಪತ್ರದಲ್ಲಿ ಒಪ್ಪಿಕೊಂಡಿದ್ದೀರಿ. ಅದನ್ನೇ ರಂಗಣ್ಣ ಅಮಲುಪಡಿಸಿದ್ದಾನೆ. ಇದರಲ್ಲಿ ನೀವು ಆಕ್ಷೇಪಣೆ ಮಾಡುದಂಥಾದ್ದು ಏನೂ ಇಲ್ಲ. ಈಗ ಈ ಹಣ ನಿಮ್ಮ ಕೈಗೆ ತಿರುಗಿ ಬಂದುದರಿಂದ ಈ ಕ್ರಯಪತ್ರವು ಸತ್ತಿತು. ರಂಗಣ್ಣನ ಹೊಲಮನೆಗಳ ಮೇಲೆ ನಿಮಗಿದ್ದ ಅಧಿಕಾರ ಹೋಯಿತು, ಒಂದು ಮದುವೆ ಮಾಡಿಸಿದ ಪುಣ್ಯದಲ್ಲಿ ಭಾಗಿಯಾದ ಸಂತೋಷಯಾವಾಗಲೂ ನಿಮಗಿದ್ದೇ ಇರುತ್ತೆ." ಎಂದು ಹೇಳಿ ಕರಣಿಕ ಸೂರಯ್ಯ ಆ ಪತ್ರವನ್ನು ರದ್ದುಪಡಿಸಿ ಗೆರೆಯೆಳೆದರು.

ರಂಗಣ್ಣನ ಹೊಲಮನೆಗಳನ್ನು ಅಗ್ಗದಲ್ಲಿ ಒಳಗೆ ಹಾಕಿಕೊಳ್ಳಬೇಕೆಂದು ಮಾಡಿದ ತಂತ್ರ ವೀರಯ್ಯ ನನ್ನೇ ತಿರುಗಿ ಹೊಡೆಯಿತು. ವೀರಯ್ಯನಿಗೆ ಏನು ಹೇಳಬೇಕೆಂದು ತೋರಲಿಲ್ಲ. ಬುದ್ಧಿ ಮಾತ್ರ ಬಂತು. ಆಮೇಲೆ ಈ ವಿಧವಾದ ಹಾಳು ಬುದ್ಧಿ ಅವನಿಗೆ ಬರಲೇ ಇಲ್ಲ.



# ನಂಬುಗೆ

ಇಮಾಮ್ ಬುಖಾರೀ ಎಂಬ ಸಜ್ಜನರು ಒಂದುಸಾರಿ ಹಡಗಿನಲ್ಲಿ ಪ್ರಯಾಣ ಮಾಡುತ್ತಿದ್ದರು. ಹಡಗಿನ ಯಜಮಾನನೂ, ಇನ್ನಿತರ ಪ್ರಯಾಣಿಕರೂ ಅವರನ್ನು ಚೆನ್ನಾಗಿ ಬಲ್ಲರು. ಹೊಸಬರಾಗಿ ಬಂದವರು ಕೂಡಾ ಆ ಮಹನೀಯರ ಪರಿಚಯ ಮಾಡಿಕೊಂಡರು.

ಅಂಥವರಲ್ಲಿ ಒಬ್ಬ ಪ್ರಯಾಣಿಕನು ಇಮಾಮ್ ಬುಖಾರೀಯವರ ಹತ್ತಿರ ಸಾವಿರ ದೀನಾರಗಳಿರುವುದನ್ನು ಕಂಡುಹಿಡಿದು ಅವುಗಳನ್ನು ಅಪಹರಿಸ ಬೇಕೆಂಬ ದುರಾಲೋಚನೆಯಿಂದ ಉಪಾಯ ಹುಡುಕಿದನು. ಕದ್ದುಬಿಟ್ಟರೆ ಸಿಕ್ಕಿಬೀಳುವ ಸಂಭವವಿತ್ತು.

ಅವನಿಗೊಂದು ಉಪಾಯ ಹೊಳೆದು, "ನನ್ನ ಸಾವಿರ ದೀನಾರಗಳು ಕಾಣೆಯಾಗಿವೆ. ಯಾರೋ ಕದ್ದರು !" ಎಂದು ಹಡಗಿನ ಒಡೆಯನ ಹತ್ತಿರ ದೂರು ಹೇಳಿದನು. ಕೂಡಲೇ ಹಡಗಿನ ಯಜಮಾನನು ಎಲ್ಲರನ್ನೂ ತನಿಖೀ ಮಾಡಿ, ಯಾರ ಹತ್ತಿರವೂ ಸಾವಿರ ದೀನಾರಗಳಿಲ್ಲವೆಂದು ರುಜು ಮಾಡಿಕೊಂಡನು.

ಆದರೆ ಅವನು ಇಮಾಮ್ ಬುಖಾರೀಯನ್ನು ಮಾತ್ರ ಶೋಧಿಸಲಿಲ್ಲ.

ಇಮಾಮ್ ಬುಖಾರಿಯನ್ನು ಕೂಡಾ ತನಿಖೀ ಮಾಡುವಂತೆ ಪ್ರಯಾಣಿಕನು ರಹಸ್ಯವಾಗಿ ಹೇಳಿದನು. ಅವರನ್ನು ತನಿಖೀ ಮಾಡುವ ಅಗತ್ಯವಿಲ್ಲವೆಂದನು ಹಡಗಿನ ಒಡೆಯ.

ಆದರೆ ಇಮಾಮ್ ಬುಖಾರೀ ತಮ್ಮ ಸಾಮಾನುಗಳನ್ನು ಕೂಡಾ ಶೋಧಿಸಲೇ ಬೇಕೆಂದು ಹಟ ಹಿಡಿದು ದರಿಂದ ಕಡೆಗೆ ಹಾಗೂ ಮಾಡಲಾಯಿತು.

ಅವರ ಹತ್ತಿರ ದೀನಾರಗಳಿರಲಿಲ್ಲ.

ತಾಳ್ಮೆ ತಪ್ಪಿದ ಆ ಪ್ರಯಾಣಿಕನು ಇಮಾಮ್ ಬುಖಾರೀಯೊಂದಿಗೆ, "ನಿಮ್ಮ ಸಾವಿರ ದೀನಾರಗಳ ಚೀಲ ಏನು ಮಾಡಿದಿರಿ ?" ಎಂದು ಕೇಳಿಬಿಟ್ಟ.

"ಸಮುದ್ರದಲ್ಲಿ ಹಾಕಿಬಿಟ್ಟೆ. ಅದು ನನ್ನ ಹತ್ತಿರ ಕಂಡರೆ ನನ್ನನ್ನು ಯಾರಾದರೂ ನಂಬುತ್ತಾರೆಯೆ ? ನನಗೆ ಹಣಕ್ಕಿಂತ ಪ್ರಜೆಗಳ ನಂಬುಗೆಯೇ ಮುಖ್ಯ !" ಎಂದರು ಇಮಾಮ್ ಬುಖಾರೀ.





# ಪಿಶಾಚಿಗಳ ಅನುಮಾನ

ಒಂದು ಸಾರಿ ಪಿಶಾಚ ಲೋಕದಲ್ಲಿದ್ದ ಎರಡು ಬಾಲ ಪಿಶಾಚಿಗಳಿಗೆ ಮನುಷ್ಯರನ್ನು ನೋಡಿ ತುಂಬಾ ಕುತೂಹಲವೆನಿಸಿತು. ಕೆಲವು ದಿನಗಳವರೆಗೆ ಮನುಷ್ಯರ ನಡುವೆ ನಡೆದಾಡಬೇಕೆಂಬ ಆಶೆಯಾಯಿತು. ಅಂತಲೇ ಅವುಗಳು ಮನುಷ್ಯರ ರೂಪಗಳನ್ನು ಧರಿಸಿ ಒಂದಾನೊಂದು ಊರನ್ನು ಸೇರಿದುವು. ಆ ಊರಿನ ಹೊರಗಿನ ಬದಿಯಲ್ಲಿ ಅವರಿಗೆ ಒಬ್ಬ ರೈತನು ಕಾಣಿಸಿದನು.

"ನಾವಿಬ್ಬರು ದಿಕ್ಕಿಲ್ಲದ ಅಣ್ಣತಮ್ಮಂದಿರು. ನಿಮ್ಮ ಮನೆಯಲ್ಲಿ ಏನಾದರೂ ಕೆಲಸ ಕೊಡಿಸಿದರೆ ನಂಬುಗೆಯಾಗಿ ಮಾಡಿಕೊಂಡಿರುತ್ತೇವೆ." ಎಂದು ಪಿಶಾಚಿಗಳು ವಿನಯದಿಂದ ಆ ರೈತನೊಂದಿಗೆ ಹೇಳಿದುವು.

"ನೋಡಿ ಮಕ್ಕೇ! ಗಟ್ಟಿಮುಟ್ಟಾಗಿದ್ದೀರಾ! ಎತ್ತುಗಳ ಬೆಲೆ ವಿಪರೀತ ಏರಿ ಹೋಯಿತು. ನಿಮ್ಮನ್ನು ನೇಗಿಲಿಗೆ ಕಟ್ಟಿದರೆ ಗದ್ದೆಯನ್ನು ಉಳಬಲ್ಲಿರಾ?" ಎಂದು ಕೇಳಿದನು ರೈತ.

"ಮನುಷ್ಯರು ಎತ್ತುಗಳ ಹಾಗೆ ಗದ್ದೆ ಉಳುವುದೇ?" ಎಂದು ಪಿಶಾಚಿಗಳು ಆಶ್ಚರ್ಯಪಟ್ಟು ಕೇಳಿದುವು.

"ಇದರಲ್ಲಿ ಆಶ್ಚರ್ಯ ಪಡಲಿಕ್ಕೇನಿದೆ? ಎತ್ತುಗಳಿಗಿಂತ ಮನುಷ್ಯರ ಬೆಲೆಯೇ ತುಂಬ ಕಮ್ಮಿ. ನನ್ನ ಗದ್ದೆಗಳಿಗೆ ಈಗಾಗಲೇ ಎರಡು ಮನುಷ್ಯರ ನೇಗಿಲು ಹಾಕಿದ್ದೇನೆ. ನೀವು ಒಪ್ಪಿದರೆ ಮೂರನೇ ನೇಗಿಲಿಗೆ ಕಟ್ಟುತ್ತೇನೆ." ಎಂದ ರೈತ.

ಪಿಶಾಚಿಗಳು ಆ ರೈತನೊಂದಿಗೆ ಅವನ ಗದ್ದೆಯ ಕಡೆಗೆ ಹೋಗಿ ನೋಡಿದುವು. ನಾಲ್ವರು ಮನುಷ್ಯರನ್ನು ಎರಡು ನೇಗಿಲಿಗೆ ಕಟ್ಟಿಹಾಕಲಾಗಿತ್ತು. ಇಬ್ಬರು ಮನುಷ್ಯರು ಒಂದೊಂದು ನೇಗಿಲನ್ನು ಹಿಡಿದುಕೊಂಡು ಬಾರು ಕೋಲಿನಿಂದ ನಿರ್ದೇಶಿಸುತ್ತ ಗದ್ದೆ ಉಳುಮೆ ಮಾಡಿಸುತ್ತಿದ್ದರು. ನೇಗಿಲಿಗೆ ಕಟ್ಟಲ್ಪಟ್ಟ ಮನುಷ್ಯರ ಅವಸ್ಥೆಯನ್ನು ನೋಡಿ ಪಿಶಾಚಿಗಳ ಮನಸ್ಸು ಅಯ್ಯೋ ಎಂದಿತು. ಆ ಕಷ್ಟ ಹೇಗಿರುವುದೆಂದು ನೋಡಲು ಅವು ಮೂರನೇ ನೇಗಿಲಿಗೆ ತಮ್ಮನ್ನು ಕಟ್ಟಿಸಿಕೊಂಡು ಸ್ವಲ್ಪಹೊತ್ತು ಗದ್ದೆಯನ್ನು ಉತ್ತವು. ಆ ರೈತನೇ ಪಿಶಾಚಿಗಳ ನೇಗಿಲು ಹಿಡಿದಿದ್ದನು. ಅವನು ಎಂತಹ ಕರ್ಕೋಟಕನೆಂಬುದು ಅವುಗಳಿಗೆ ಅನುಭವವಾಯಿತು. ಅವುಗಳು ಧರಿಸಿದ್ದ ಮನುಷ್ಯ ಶರೀರ ಅವರ ಶ್ರಮದಿಂದ ಪೂರ್ತಿ ಬಳಲಿ

ಬೆಂಡಾಯಿತು. ರೈತನು ಕೊಟ್ಟ ಪ್ರತಿಫಲವು ಕೂಡಾ ತುಂಬಾ ಸ್ವಲ್ಪವೇ.

ಆ ರೈತನ ಹತ್ತಿರ ಅಂತಹ ಕೆಲಸಮಾಡಲು ತಮಗೆ ಇಷ್ಟವಿಲ್ಲವೆಂದು ಹೇಳಿ ಬಾಲ ಪಿಶಾಚಿಗಳು ಅಲ್ಲಿಂದ ಹೊರಟುಹೋದುವು. ಹೋಗುತ್ತಾ ಒಬ್ಬ ಎಣ್ಣೆ ವ್ಯಾಪಾರದವನ ಮನೆಗೆ ಹೋಗಿ ಅವನೊಂದಿಗೆ ತಮಗೇನಾದರೂ ಕೆಲಸ ಕೊಡುವಂತೆ ಕೇಳಿಕೊಂಡುವು. ಎಣ್ಣೆ ವ್ಯಾಪಾರಿ ಅವುಗಳನ್ನು ತಲೆಯಿಂದ ಕಾಲಿನವರೆಗೆ ನೋಡಿ, "ಬನ್ನಿ ಒಳಗೆ" ಎಂದು ಕರೆದುಕೊಂಡು ಹೋದನು.

ಅವನು ಅವುಗಳನ್ನು ಒಂದು ರಹಸ್ಯದ ಕೋಣೆಗೆ ಕರೆದುಕೊಂಡು ಹೋಗಿ, "ನೀವು ಈ ಕೋಣೆಯಲ್ಲೇ ಇದ್ದು ಈ ಕಾಯಿಗಳ ಎಣ್ಣೆಯನ್ನು ತೆಗೆಯಬೇಕು. ತಿಳಿಯಿತೆ?" ಎಂದನು.

"ಇದರ ಎಣ್ಣೆ ಏತಕ್ಕೆ? ಇದು ವಿಷಕ್ಕೆ ಸಮಾನವಾಯಿತಲ್ಲಾ?" ಎಂದು ಕೇಳಿದುವು ಪಿಶಾಚಿಗಳು. "ಏಕೆಂದರೇನು? ಎಳ್ಳೆಣ್ಣೆಯಲ್ಲಿ ಬೆರಸಲಿಕ್ಕೇ," ಎಂದ ವ್ಯಾಪಾರಿ. "ಅಯ್ಯೋ! ಅದರಿಂದ ಜನರ ಆರೋಗ್ಯ ಹಾಳಾಗುವುದಲ್ಲಾ!" ಎಂದು ಪಿಶಾಚಿಗಳು ಗಾಬರಿ ತೋರಿದುವು.

"ಕಲಬೆರಿಕೇ ಎಣ್ಣೆ ಕಡಿಮೆದರಕ್ಕೂ ಶುದ್ಧ ಎಣ್ಣೆ ಹೆಚ್ಚಿನ ಬೆಲೆಗೂ ಮಾರುತ್ತೇನೆ, ಯಾರಿಗೇನಾದರೆ ನನಗೇನಾಯಿತು? ರೋಗ ಬಂದರೆ ವೈದ್ಯರಿಗೇನು ಕಡಿಮೆಯೇ ಊರಲ್ಲಿ? ನನಗೆ ಬರಬೇಕಾದ್ದು ಹಣ." ಎಂದ ವ್ಯಾಪಾರಿ.

ಬಡಜನರೆಲ್ಲ ಕಲಬೆರಿಕೆಯ ಎಣ್ಣೆ ಕೊಂಡುಕೊಂಡು ರೋಗರುಜಿನಗಳಿಗೆ ಗುರಿಯಾಗುತ್ತಾರೆಂದು ಪಿಶಾಚಿಗಳಿಗೆ ಅರ್ಥವಾಯಿತು.

"ಈ ಕೆಲಸ ನಮಗೆ ಬೇಡವೇ ಬೇಡ!" ಎಂದು ಪಿಶಾಚಿಗಳು ಅಲ್ಲಿಂದ ಹೊರಡಲು ತಿರುಗಿದುವು.

"ನಿಲ್ಲಿ! ಬೇಡ ಅಂದರೆ ಬಿಡಲಾರೆ. ನನ್ನ ರಹಸ್ಯವನ್ನೆಲ್ಲ ತಿಳಿದ ನಿಮ್ಮನ್ನು ಹೋಗಲು ಬಿಡುವೆನೇ? ಹಾಗೂ ಹೋದರೆ ಯಮುನಬಳಿಗೇ!" ಎಂದ ಆ ಎಣ್ಣೆ ವ್ಯಾಪಾರಿ ಕಣ್ಣುಗಳನ್ನು ತಿರುಗಿಸುತ್ತ.



"ಒಹೋ!" ಎಂದು ಪಿಶಾಚಿಗಳೆರಡೂ ಫಕ್ಕನೆ ಮಾಯವಾಗಿ ಹೋದುವು.

ಅಲ್ಲಿಂದ ಪಾರಾದ ಆ ಬಾಲ ಪಿಶಾಚಿಗಳು ನೆಟ್ಟಗೆ ಆ ದೇಶದ ರಾಜನ ಬಳಿಗೆ ಹೋದುವು. ಆ ಸಮಯ ದಲ್ಲಿ ರಾಜನು ಸೇನಾಧಿಪತಿಯನ್ನು ಬಯ್ಯುತ್ತಾ ಇದ್ದ. "ಪ್ರಜೆಗಳು ತೆರಿಗೆ ಕೊಡಲು ನಿರಾಕರಿಸಿದರೆ, ಬಂದೀ ಖಾನೆಗೆ ದೂಡಿ ಕೊರಡೆಯಿಂದ ಹೊಡೆಯಿರಿ. ಬಲವಂತವಾಗಿ ಮನೆಯೊಳಗೆ ನುಗ್ಗಿ ಅಷ್ಟು ಬೆಲೆಯ ವಸ್ತುಗಳನ್ನು ಎತ್ತಿಕೊಳ್ಳಿರಿ." ಎಂದು ಜೋರಿನಿಂದ ಹೇಳುತ್ತಿದ್ದನು.

ಪಿಶಾಚಿಗಳೆರಡೂ ಭಟರ ವೇಷದಲ್ಲಿ ಅಲ್ಲಿರುವ ಭಟರೊಂದಿಗೆ ಸೇರಿಕೊಂಡುವು. ಸೇನಾಪತಿ ಭಟ ರನ್ನು ನೋಡಿ, "ರಾಜಾಜ್ಞೆ ಕೇಳಿದಿರಷ್ಟೆ? ಅರ್ಥ ವಾಯಿತಷ್ಟೆ? ಇನ್ನು ಪ್ರತ್ಯೇಕ ನಾನೇನೂ ಹೇಳ ಬೇಕಾಗಿಲ್ಲ. ಹೊರಡಿರಿ." ಎಂದನು.

ತನಗೆ ರಾಜನರ್ತಕಿಯ ನೃತ್ಯ ನೋಡುವ ವೇಳೆ ಸಮೀಪಿಸಿತೆಂದು ಹೇಳಿ ರಾಜನು ಅಲ್ಲಿಂದ ಹೋಗಿ ಬಿಟ್ಟನು. ಪಿಶಾಚಿಗಳಿಗೆ ಅಲ್ಲಿ ನಿಲ್ಲುವುದು ಸಾಕಾಗಿ ಬೇರೊಂದು ಕಡೆಗೆ ಹೋದುವು. ಪ್ರತಿ ಕೆಲಸವನ್ನು ವಿಚಾರಿಸಿದಾಗಲೂ ಅವುಗಳಿಗೆ ಅಸಹನೀಯವಾದ ವಿಷಯಗಳೇ ಗೊತ್ತಾಗುತ್ತಿತ್ತು. ಎಲ್ಲಿಯೂ ಹೆಚ್ಚು ಹೊತ್ತು ಇರಲಾಗಲಿಲ್ಲ ಅವುಗಳಿಗೆ. ಕಡೆಗೆ ಈ ತಿರುಗಾಟ ಸಾಕೆನಿಸಿ ತಮ್ಮ ಪಿಶಾಚಿಗಳ ಪ್ರಾಂತಕ್ಕೇ ಹೊರಟುಹೋದುವು.

ಅಲ್ಲಿ ಒಂದು ದೊಡ್ಡ ಪಿಶಾಚಿ ಅವುಗಳನ್ನು ಮಾತಾಡಿಸುತ್ತ, "ಆಗಲೇ ಬಂದುಬಿಟ್ಟಿರೇನು? ಬಹಳಕಾಲ ಮನುಷ್ಯರ ಲೋಕ ಬಿಟ್ಟು ಬರಲಾರಿ ರೇನೋ ಅಂದುಕೊಂಡೆ. ಏನು ಕತೆ? ಏನಾಯಿತು?" ಎಂದು ವಿಚಾರಿಸಿತು.

"ಆಗಲಿಕ್ಕೇನಿದೆ? ಏನೂ ಇಲ್ಲ. ಮನುಷ್ಯರೆಲ್ಲಾ ತುಂಬಾ ತುಂಬಾ ಬಡವರು. ಸಾಧುಗಳು. ನಮಗಿಂತ ಮೊದಲೇ ಅವರ ನಡುವೆ ಕೆಲವು ದೊಡ್ಡ ದೊಡ್ಡ ಪಿಶಾಚಿಗಳು ಸೇರಿಕೊಂಡು ಮನುಷ್ಯ ರೂಪ ಧರಿಸಿ ಪಾಪದ ಮನುಷ್ಯರನ್ನು ನಾನಾ ಯಾತನೆಗೆ ಗುರಿ ಪಡಿಸಿಕೊಂಡಿವೆ. ನಮ್ಮಂಥ ಚಿಕ್ಕ ಪಿಶಾಚಿಗಳಿಗೆ ತಂಟೆ ಮಾಡುವ ಸಂದರ್ಭ ಅಲ್ಲಿಲ್ಲ. ನಮ್ಮವರ ಮಧ್ಯಕ್ಕೇ ನಾವೇಕೆ ಹೋಗಿ ಬೈಗಳು ತಿನ್ನುವುದೆಂದು ಬಂದುಬಿಟ್ಟೆವು." ಎಂದುವು ಬಾಲ ಪಿಶಾಚಿಗಳು.

ದೊಡ್ಡ ಪಿಶಾಚಿ ನಕ್ಕು, "ಮನುಷ್ಯರನ್ನು ಯಾತನೆ ಪಡಿಸುವುದು ಮನುಷ್ಯರೇ ಕಾಣ್ರೋ! ಅವು ಪಿಶಾಚಿ ಗಳಲ್ಲ. ಅನುಭವವಿಲ್ಲದೆ ನೀವು ಹಾಗೆ ಅಂದು ಕೊಂಡಿರಿ!" ಎಂದಿತು.

ಮನುಷ್ಯರಲ್ಲಿ ಪಿಶಾಚಿಗಳನ್ನು ಮೀರಿಸುವವರಿದ್ದಾ ರೆಂದು ತಿಳಿದು ಬಾಲ ಪಿಶಾಚಿಗಳಿಗೆ ಆಶ್ಚರ್ಯ!



# ಅಸಲು ಪಂಥಗಳು

ವಿಟ್ಟಯ್ಯನೂ ಕಿಟ್ಟಯ್ಯನೂ ಏನೋ ತಗಾದೆ ತೆಗೆದು ನ್ಯಾಯ ಕೇಳಲು ರಾಜನ ಬಳಿಗೆ ಬಂದರು. ಇಬ್ಬರೂ ಪಂಥ ಕಟ್ಟಿಕೊಂಡವರಂತೆ. ನೂರು ಎಂದು ವಿಟ್ಟಯ್ಯ ಪಂಥ ಕಟ್ಟಿದರೆ ಕಿಟ್ಟಯ್ಯ ಇನ್ನೂರು ಅಂದನಂತೆ. ಆದರೆ ಕಿಟ್ಟಯ್ಯ ಪಂಥದಲ್ಲಿ ಸೋತು ಇನ್ನೂರು ವರಹ ಕೊಡುವುದಕ್ಕೆ ಬದಲು ಎರಡು ವರಹ ಮಾತ್ರ ಕೊಟ್ಟನಂತೆ. ಇದೇ ಅವರ ತಗಾದೆ.

"ವಿಟ್ಟಯ್ಯ ನೂರು ಅಂದರೆ ನಾನು ಕೋಪಬಂದು ಎರಡು ನೂರು ಅಂತಹೇಳಿದೆ. ವರಹಗಳು ಅಂತ ನಾನು ಹೇಳಲಿಲ್ಲ. ಹತ್ತು ವರಹಾ ಸಹ ನನ್ನಲ್ಲಿಲ್ಲ. ನೂರು ವಗಹ ಪಂಥ ಕಟ್ಟಬಲ್ಲೆನೆ? ನನ್ನ ಉದ್ದೇಶ ಇನ್ನೂರು ಕವಡೆಗಳು ಅಂತಾ!" ಎಂದ ಕಿಟ್ಟಯ್ಯ.

ಕಿಟ್ಟಯ್ಯನ ಬುದ್ಧಿವಂತಿಕೆಗೆ ಮೆಚ್ಚಿ ರಾಜನು ವಿಟ್ಟಯ್ಯನಿಗೆ ಕಿಟ್ಟಯ್ಯನ ಪರವಾಗಿ ಇನ್ನೂರು ವರಹಗಳನ್ನು ಕೊಟ್ಟು ಕಿಟ್ಟಯ್ಯನನ್ನು ತನ್ನ ಆಸ್ಥಾನದಲ್ಲಿ ಇರಿಸಿಕೊಂಡನು.

ಮರುದಿನ ಅವರಿಬ್ಬರೂ ಮತ್ತೇನೋ ತಗಾದೆಯಲ್ಲಿ ನ್ಯಾಯ ಕೇಳಲು ರಾಜನ ಬಳಿಗೆಬಂದರು. ಕಳೆದ ದಿನ ಅವರೇನೋ ಪಂಥ ಕಟ್ಟಿಕೊಂಡು ಸ್ವಲ್ಪ ಹಣ ಸಂಪಾದಿಸಿದ್ದರಂತೆ. ಅದು ಕಿಟ್ಟಯ್ಯನ ಬುದ್ಧಿ ವಂತಿಕೆಯಿಂದ ಬಂದುದಂತೆ. ಆದರೂ ವಿಟ್ಟಯ್ಯ ಅದನ್ನು ಪೂರಾ ತಾನೇ ತೆಗೆದು ಕೊಳ್ಳದೆ ಕಿಟ್ಟಯ್ಯನೊಂದಿಗೆ ಹಂಚಿ ಕೊಳ್ಳ ಬೇಕು ಅನುತ್ತಾನಂತೆ. ವಿಟ್ಟಯ್ಯ ಒಲ್ಲೆನೆನ್ನುತ್ತಾನಂತೆ.

ಅವರು ತಕರಾರು ಮಾಡಿಕೊಳ್ಳುವುದು ತಾನು ಕೊಟ್ಟ ಹಣವನ್ನು ಕುರಿತೇ ಎಂದುಕೊಂಡು ರಾಜನು ವಿಟ್ಟಯ್ಯನ ಪ್ರಾಮಾಣಿಕತೆಗೆ ಮೆಚ್ಚಿ ಅವನಿಗೆ ಕೂಡಾ ಉದ್ಯೋಗ ಕೊಟ್ಟು "ನೀವು ಹಾಕಿ ಕೊಂಡ ಪಂಥಗಳು ಎಂಥಾದ್ದು ?" ಎಂದು ಕೇಳಿದನು.

ಅವರು ಮಾಡಿಕೊಂಡ ಮೊದಲನೇ ಪಂಥ ಕಿಟ್ಟಯ್ಯ ರಾಜನ ಆಸ್ಥಾನದಲ್ಲಿ ಸೇರುತ್ತಾನೆಂಬುದೇ. ಎರಡನೇ ಪಂಥ ವಿಟ್ಟಯ್ಯನಿಗೂ ಆಸ್ಥಾನದಲ್ಲಿ ಕೆಲಸ ಕೊಡಿಸುತ್ತಾನೆಂಬುದು ! ಎರಡೂ ನಡೆಯಿತಲ್ಲ !

ರಾಜನು ದಂಗಾಗಿ ತಲೆದೂಗಿದನು!





# ಜ್ಞಾನೋದಯ

ಒಂದು ಊರಿನ ಪುಣ್ಯಾಶ್ರಮದಲ್ಲಿ ರಾಮಾನಂದ ಪಾದರೆಂಬ ಸ್ವಾಮಿಗಳು ದಿನಾ ಧರ್ಮೋಪನ್ಯಾಸ ಮಾಡುತ್ತಿದ್ದರು. ವಿಶೇಷವಾಗಿ ಅವರು ಭಗವದ್ಗೀತೆಯ ಮೇಲೆ ಅತಿ ರಮ್ಯವೆನಿಸುವಂತೆ ವಾಖ್ಯಾನಿಸಿ ಹೇಳು ತ್ತಿದ್ದರು. ಆಗ ಸಂದರ್ಭಕ್ಕೆ ಸರಿಯಾಗಿ ತಕ್ಕ ಉದಾ ಹರಣೆಗಳನ್ನು ಸೇರಿಸಿ ಹೇಳುತ್ತ, ಜನರಲ್ಲಿ ತುಂಬಾ ಆಸಕ್ತಿ ಹುಟ್ಟಿಸುತ್ತಿದ್ದರು. ಅವರ ಉಪನ್ಯಾಸಗಳನ್ನು ಕೇಳಿದವರು ಚಿನ್ನದಿಂದ ಹಿಡಿದು ತಮ್ಮ ಶಕ್ತ್ಯಾನು ಸಾರವಾಗಿ ಕಾಣಿಕೆ ಕೊಡುತ್ತಿದ್ದರು. ಹಾಗೆ ಸೇರಿದ ಧನದಿಂದ ಧರ್ಮಶಾಲೆಗಳನ್ನು ಕಟ್ಟಿಸಿ ಬಡಬಗ್ಗರಿಗೆ ಸಹಾಯಗೊಳಿಸಬೇಕೆಂಬುದು ಅವರ ಉದ್ದೇಶ ವಾಗಿತ್ತು. ಆದಕ್ಕಾಗಿ ಅವರು ಒಂದೊಂದು ಊರಿನಲ್ಲಿ ಕೆಲವು ವಾರಗಳವರೆಗೆ ತಂಗಿ, ಸಂಚಾರ ಕ್ರಮದಲ್ಲಿ ಹಣ ಸೇರಿಸಿಕೊಂಡು ಬರುತ್ತಿದ್ದರು. ರಾಮಾನಂದ ಪಾದರ ಹತ್ತಿರ ಅವರ ಶಿಷ್ಯ ಆದಿತ್ಯನು ಕೂಡಾ ಅವರ ನಿಕಟವರ್ತಿಯಾಗಿರುತ್ತಿದ್ದನು.

ಒಂದು ದಿನ ಆ ಗುರುಶಿಷ್ಯರು ಒಂದು ಊರನ್ನು ಬಿಟ್ಟು ಇನ್ನೊಂದು ಊರಿಗೆ ಹೋಗುತ್ತಾ ಇದ್ದರು. ಆಗ ಆದಿತ್ಯನು ತನ್ನ ಗುರುವಿನೊಂದಿಗೆ ಬಹಳ ದಿನಗಳಿಂದ ತನ್ನ ಮನಸ್ಸಿನಲ್ಲಿದ್ದ ಒಂದು ಸಂದೇಹ ವನ್ನು ಕುರಿತು ಕೇಳಿದನು.

"ಸ್ವಾಮಿ, ಭಾರತ ಯುದ್ಧದಲ್ಲಿ ಹೋರಾಡಿದ್ದೂ, ವಿಜಯವನ್ನು ಸಾಧಿಸಿದ್ದೂ ಅರ್ಜುನನೇ ಆಗಿರುವಾಗ, ಕೃಷ್ಣನದು ಕೇವಲ ಮಾತಿನ ಸಹಾಯಮಾತ್ರ ತಾನೇ? ಹಾಗಿರುವಾಗ ಅರ್ಜನನಿಗಿಂತ ಕೃಷ್ಣನಿಗೇ ಹೆಚ್ಚಿನ ಹೆಸರುಬರಲು ಕಾರಣವೇನು? ಅದರ ಮೇಲೆ ದೈವಾಂಶ ಸಂಭೂತನಾದ ಕೃಷ್ಣನು ಅನೇಕಸಾರಿ ಕುಯುಕ್ತಿಗಳನ್ನು ಮಾಡುವುದೂ, ಅರ್ಜುನನಿಂದಲೂ ಭೀಮನಿಂದಲೂ ಅಧರ್ಮ ಕಾರ್ಯಗಳನ್ನು ಮಾಡಿಸು ವುದೂ, ಆ ವಿಧವಾಗಿ ವಿಜಯವಾಗುವಂತೆ ಮಾಡಿದು ದನ್ನೆಲ್ಲ ನೋವಾಗ ನನಗೆ ಭಗವದ್ಗೀತೆಯ ಮೇಲೆಯೂ ಪುರಾಣಗಳ ಮೇಲೆಯೂ ಗೌರವ ಬಾರದೆ ಹೋಗುತ್ತದೆ."

ಶಿಷ್ಯನ ಅನುಮಾನವನ್ನು ಕೇಳಿ ರಾಮಾನಂದ ಪಾದರು ತಲೆದೂಗಿ ಮುಗುಳು ನಗುತ್ತ, "ಅಪ್ಪಾ, ಅವಸರಪಡಬೇಡ. ಸಂದರ್ಭ ಬಂದಾಗ ನಿನ್ನ ಸಂದೇಹಕ್ಕೆ ತನ್ನಂತೆ ಸರಿಯಾದ ಉಪಶಮನ ದೊರೆಯುತ್ತೆ" ಎಂದರು.

ಡಿ. ಸೌಜನ್ಯ

ಮುಂದೆ ನಡೆಯುತ್ತಾ ಅವರು ಒಂದು ಕಾಡುದಾರಿಯನ್ನು ಪ್ರವೇಶಿಸಿದರು. ಗುರುಗಳು ಆದಿತ್ಯನನ್ನು ಒಂದು ಮರದ ಮೇಲೆ ಹತ್ತಿಸಿ ದಪ್ಪದ ಒಂದು ಕೊಂಬೆಯನ್ನು ಕೊಯ್ಯಿಸಿದರು. ಆದಿತ್ಯನು ಅವರು ಹೇಳಿದಂತೆ ಆ ಕೊಂಬೆಯನ್ನು ಕಡಿದು ಬೀಳಿಸಿ, ಅದರ ರೆಂಬೆ ಸೊಪ್ಪುಗಳನ್ನೆಲ್ಲ ತೆಗೆದುಹಾಕಿ ಗಟ್ಟಿಮುಟ್ಟಾದ ಒಂದು ಲಾಠಿಯನ್ನು ತಯಾರಿಸಿ ಕೈಯಲ್ಲಿ ಹಿಡಿದುಕೊಂಡನು.

ಆಮೇಲೆ ಅವರು ಸ್ವಲ್ಪದೂರ ಮುಂದೆ ಹೋಗಲು, ಒಬ್ಬ ಕಳ್ಳ ಒಂದು ಮರದ ಹಿಂದಿನಿಂದ ಅವರ ಮುಂದೆಬಂದು ನಿಂತು, ಕೈಯಲ್ಲಿದ್ದ ಕಿರು ತುಪಾಕಿಯನ್ನು ಎತ್ತಿ ಅವರಿಗೆ ಗುರಿ ಹಿಡಿದು, "ಒಳ್ಳೆಯ ಮಾತಿನಲ್ಲಿ ನಿಮ್ಮ ಹತ್ತಿರವಿರುವ ಹಣವನ್ನೆಲ್ಲಾ ಕೊಟ್ಟುಬಿಡಿ. ಇಲ್ಲದಿದ್ದರೆ ಸಾಯುವಿರಿ! ಹುಂ, ಬೇಗ!" ಎಂದನು ಕಣ್ಣು ತಿರುಗಿಸುತ್ತಾ.

ಈ ಆಕಸ್ಮಿಕ ಸಂಘಟನೆಯನ್ನು ನೋಡಿ ಹೆದರಿ ಹೋದ ಆದಿತ್ಯನು, ನಡುಗುವ ಕಂಠದಿಂದ, "ಗುರುದೇವಾ! ನಿಮ್ಮ ಹತ್ತಿರವಿರುವ ಹಣದ ಚೀಲವನ್ನು ಈ ಲಟ್ಟ ಮನುಷ್ಯನಿಗೆ ಕೊಟ್ಟು ಪ್ರಾಣ ಉಳಿಸಿಕೊಳ್ಳುವುದೇ ಒಳ್ಳೇದು." ಎಂದನು.

ಅವರ ಹತ್ತಿರ ಹಣವಿರುವ ಸಂಗತಿ ನಿಜವಾದುದೆಂದು ತಿಳಿದ ಕಳ್ಳನು ಇನ್ನಷ್ಟು ಜೋರು ಮಾಡಿದನು. ರಾಮಾನಂದಪಾದರು ಕಳ್ಳನೊಂದಿಗೆ, "ಅಪ್ಪಾ, ನನ್ನ ಹತ್ತಿರವಿರುವ ಹಣ ಬಡಬಗ್ಗರ ಸಹಾಯಕ್ಕಾಗಿ ಖರ್ಚುಮಾಡಲು ಕೂಡಿಸಿಕೊಂಡದ್ದು. ಇದನ್ನು ನೀನು ಕೇಳುವುದು ನ್ಯಾಯವಲ್ಲ" ಎಂದರು.

ಕೂಡಲೇ ಕಳ್ಳನು ಬಲಾತ್ಕಾರದಿಂದ ರಾಮಾನಂದಪಾದರ ಕೈಯಲ್ಲಿದ್ದ ಹಣದ ಚೀಲವನ್ನು ಕಿತ್ತುಕೊಂಡು, "ನಾನೂ ಒಬ್ಬ ಬಡವನೇ! ನಿಮ್ಮ ಹಣ ನನಗೆ ಸೇರುವುದು ನ್ಯಾಯವೇ!" ಎಂದು ಹೊರಡಲು ತಯಾರಾದನು.

ರಾಮಾನಂದರು ಸಂಕಟದ ಸ್ವರದಿಂದ, "ಅಪ್ಪಾ! ನನ್ನ ಜೀವಿತವೆಲ್ಲಾ ಕಷ್ಟಪಟ್ಟು ಸೇರಿಸಿಕೊಂಡ ಧನವನ್ನೆಲ್ಲಾ ಕಳೆದುಕೊಂಡು ನಾನು ಬದುಕಿರುವುದು



ವ್ಯರ್ಥ! ಇನ್ನು ಮೇಲೆ ಬದುಕುವ ಆಶೆ ಕೂಡಾ ನನಗಿಲ್ಲ. ನಿನ್ನ ತುಪಾಕಿಯಿಂದ ನನ್ನನ್ನು ಕೊಂದು ಹೋಗಿಬಿಡು!" ಎಂದರು.

ಕಳ್ಳನು ಅವರ ಮಾತು ಕೇಳಿ, ದೊಡ್ಡ ಧ್ವನಿಯಿಂದ ನಗುತ್ತ, "ಓ ಸ್ವಾಮಿ! ಈ ತುಪಾಕಿ ಸಿಡಿಯದು. ಮರದ ಬೊಂಬೆ ತುಪಾಕಿ!" ಎಂದು ತನ್ನ ಬುದ್ಧಿವಂತಿಕೆಯನ್ನು ಪ್ರದರ್ಶಿಸಿದನು.

ಕೂಡಲೇ ರಾಮಾನಂದರು, "ಹಾಗೋ? ನನ್ನ ಅನುಮಾನ ನಿಜವೆಂದಾಯಿತು! ಬರೀ ಬೊಂಬೆ ತುಪಾಕೀ ಕಳ್ಳನಿಂದ ಏನೂ ಆಗದು! ನೋಡುವೆ ಏನು ಆದಿತ್ಯಾ! ನಡೆಯಲಿ ನಿನ್ನ ಲಾಠೀ ಕೆಲಸ!" ಎಂದು ಪ್ರೋತ್ಸಾಹಪಡಿಸಿದರು.

ಮರುಕ್ಷಣದಲ್ಲಿ ಆದಿತ್ಯನು ದೊಡ್ಡ ವೀರಕೇಸರಿಯಾಗಿ ಕಳ್ಳನ ಬೆನ್ನನ್ನು ಹತಾಹತಮಾಡಿದನು. ಆ ಮೇಲೆ ಕಳ್ಳನ ಕೈಗಳನ್ನು ಕಟ್ಟಿ, ಅವನನ್ನು ಅಲುಗದಂತೆ ಮರಕ್ಕೆ ಕಟ್ಟಿದನು. ಹಣದ ಚೀಲ ಮತ್ತೆ ಅವರಿಗೇ ಹಿಂದಿರುಗಿತು.

ಗುರು ಶಿಷ್ಯರು ಮತ್ತೆ ಪ್ರಯಾಣ ಹೊರಟರು. ಆಗ ರಾಮಾನಂದಪಾದರು ಆದಿತ್ಯನನ್ನು ಕುರಿತು, "ಶಿಷ್ಯಾ! ಭಾರತಯುದ್ಧಮಾಡಿದ್ದು ಅರ್ಜುನನಾದರೆ ಯುದ್ಧ ತಂತ್ರಗಳನ್ನು ಹೇಳಿ ಕೊಟ್ಟವನು ಕೃಷ್ಣ. ಇಲ್ಲಿ ಕಳ್ಳನನ್ನು ಹೊಡೆದು ಕಟ್ಟಿದವನು ನೀನೇ. ಆದರೆ ಕಾಡಿನೊಳಗೆ ಪ್ರವೇಶಿಸುವಾಗ ಕೈಯಲ್ಲಿ ಆಯುಧವಿರಬೇಕೆಂದು ಹೇಳಿದವನೂ, ಅದನ್ನು ಯಾವಾಗ ಹೇಗೆ ಉಪಯೋಗಿಸಬೇಕೆಂದು ತಿಳಿಸಿದವನೂ ನಾನು. ಕಳ್ಳನ ಕೈಯಲ್ಲಿದ್ದ ತುಪಾಕೀ ಸುಮ್ಮನೆ ಆಡುವುದನ್ನು ನೋಡಿ ಅದು ಕೇವಲ ಬೊಂಬೆ ತುಪಾಕಿಯಾಗಿರಬಹುದೇ ಅಂತ ನನಗೆ ಅನುಮಾನವಾದುದರಿಂದ, ಅದರ ನಿಜವನ್ನು ಅವನ ಬಾಯಿಯಿಂದಲೇ ಹೊರಡಿಸಿ ದೃಢಪಡಿಸಿಕೊಂಡವನು ನಾನು. ಅವನ ಮೇಲೆ ತಂತ್ರವನ್ನು ಪ್ರಯೋಗಿಸುವುದಕ್ಕೆ ಮೊದಲು ಅವನು ನನ್ನ ಹಣಕ್ಕೆ ಆಶೆಪಡಬಾರದೆಂದು ನೀತಿ ಬೋಧೆಮಾಡಿದೆನು. ಅವನು ಕೇಳಲಿಲ್ಲ. ಆದ್ದರಿಂದ ದಂಡ ಪ್ರಯೋಗವನ್ನು ಮಾಡಲೇ ಬೇಕಾಯಿತು. ಒಬ್ಬ ಸಾಧಾರಣ ಕಳ್ಳನನ್ನು ಬಗ್ಗಿಸಬೇಕಾದರೇನೇ ಇಷ್ಟೆಲ್ಲಾ ತಂತ್ರಗಳು ಬೇಕಾಗಿ ಬಂದಾಗ, ನೂರುಮಂದಿ ಕೌರವರನ್ನೂ, ಅವರ ಅಪಾರವಾದ ಬಲಗಳನ್ನೂ ಜಯಿಸಬೇಕಾದರೆ ಕೃಷ್ಣನು ಎಷ್ಟೆಲ್ಲ ತಂತ್ರಗಳನ್ನು ಮಾಡಿರಬೇಕು? ಅದಕ್ಕೇ ಕೃಷ್ಣನಿಗೆ ಕಪಟ ನಾಟಕ ಸೂತ್ರಧಾರನೆಂಬ ಬಿರುದೂ, ಕೀರ್ತಿಯೂ, ಸರ್ವಕಾರಣ ಕರ್ತನೆಂಬ ಸಂಕೇತವೂ ಮಹಾ ಗೌರವವೂ ಬಂದಿದೆ" ಎಂದು ಸಂದೇಹವನ್ನು ತೊಲಗಿಸಿದರು. ಆದಿತ್ಯನಿಗೂ ಜ್ಞಾನೋದಯವಾಗಿ ತೃಪ್ತಿಯಾಯಿತು.





# ದೇವೀಭಾಗವತ

ಸೂರ್ಯ ವಂಶದಲ್ಲಿ ರಾಮನಿಗಿಂತ ಪೂರ್ವದಲ್ಲಿ ಅನೇಕ ವರ್ಷಗಳ ಹಿಂದೆ ತ್ರಿಶಂಕು ಎಂಬ ರಾಜನಿದ್ದನು. ಈ ತ್ರಿಶಂಕು ರಾಜನೇ 'ತ್ರಿಶಂಕು ಸ್ವರ್ಗ'ಕ್ಕೆ ಕಾರಣನಾಗಿ ಪ್ರಸಿದ್ಧನಾದವನು. ವಿಶ್ವಾಮಿತ್ರನು ಇವನನ್ನು ಮರ್ತ್ಯ ದೇಹದೊಂದಿಗೇ ಸ್ವರ್ಗಕ್ಕೆ ಕಳುಹಿಸುವೆನೆಂದು ಹೇಳಿ, ಹಾಗೆ ಕಳುಹಿಸಲು ಸಾಧ್ಯವಾಗದೆ, ಅವನಿಗಾಗಿ ಒಂದು ಸ್ವರ್ಗವನ್ನೇ ಸೃಷ್ಟಿಸಿಕೊಟ್ಟನು.

ಈ ತ್ರಿಶಂಕು ರಾಜನಿಗೆ ಹರಿಶ್ಚಂದ್ರನೆಂಬ ಒಬ್ಬ ಮಗನಿದ್ದನು. ಹರಿಶ್ಚಂದ್ರನಿಗೆ ಬಹಳ ಕಾಲವಾದರೂ ಸಂತಾನವಾಗಲಿಲ್ಲ. ಕಡೆಗೆ ಅವನು ತನಗೆ ಮಕ್ಕಳು ಹುಟ್ಟಿದರೆ ವರುಣನಿಗೆ ಮೊದಲನೇ ಮಗನನ್ನು ನರಬಲಿ ಕೊಡುತ್ತೇನೆಂದು ಹರಿಕೆ ಹೇಳಿಕೊಂಡನು. ಆಮೇಲೆ ಅವನ ಹೆಂಡತಿ ಗರ್ಭಿಣಿಯಾಗಿ ಒಬ್ಬ ಮಗನನ್ನು ಹಡೆದಳು. ಹರಿಶ್ಚಂದ್ರನು ದಾನಧರ್ಮಗಳಿಂದ ಪುತ್ರೋತ್ಸವವನ್ನು ಮಾಡಿಸಿದನು.

ಆ ಸಂದರ್ಭದಲ್ಲಿ ಬ್ರಾಹ್ಮಣ ರೂಪದಲ್ಲಿ ವರುಣನು ಬಂದನು. ಅವನು ಕೂಡಾ ಹರಿಶ್ಚಂದ್ರನಿಂದ ದಾನಗಳನ್ನು ಹಿಡಿಯುತ್ತ, "ನಾನಾರು ಗೊತ್ತಾಯಿತೆ? ನಿನ್ನ ಮಗನನ್ನು ನನಗೆ ಬಲಿ ಕೊಟ್ಟು ಹೇಳಿದ ಮಾತು ನಡೆಸು" ಎಂದನು.

"ಮಹಾತ್ಮಾ, ನನ್ನ ಹೆಂಡತಿ ನಲುವತ್ತು ದಿನಗಳವರೆಗೆ ಬಾಣಂತಿ ಮೈಲಿಗೆಯಲ್ಲಿದ್ದಾಳೆ. ಅಷ್ಟರವರೆಗೆ ತಾಳು" ಎಂದನು.

ವರುಣನು ಸರಿಯೆಂದು ಹೊರಟು ಹೋಗಿ, ನಲುವತ್ತು ದಿನಗಳು ಕಳೆದಮೇಲೆ ಮತ್ತೆ ಬಂದನು. ಹರಿಶ್ಚಂದ್ರನು ಅವನಿಗೆ ಅತಿಥಿ ಸತ್ಕಾರಗಳನ್ನು ಮಾಡಿ, "ಇಷ್ಟೊಂದು ಚಿಕ್ಕಬಾಲನು ಯಜ್ಞಪಶುವಾಗಿ ಉಪಯೋಗಕ್ಕೆ ಬಾರನಲ್ಲಾ? ಅವನಿಗೆ ಉಪನಯನ ಸಂಸ್ಕಾರ ಮುಗಿಯುವವರೆಗೂ ತಾಳಿರಿ" ಎಂದನು ಹರಿಶ್ಚಂದ್ರ.

ಈಸಾರಿ ವರಣನಿಗೆ ಕೋಪ ಬಂದಿತು. "ನಿನ್ನನ್ನು ನಂಬಲಾರೆ. ಮಗನ ಮೇಲಿನ ಪ್ರೀತಿಯಿಂದ ಹೀಗೆ ಹೇಳುವಿ. ನನಗೆ ಅಷ್ಟು ಮಾತ್ರ ಗೊತ್ತಾಗುವುದಿಲ್ಲವೆಂದುಕೊಂಡೆಯಾ? ಆದರೂ ಇದೊಂದು ಕಡೇ

**೧೯. ಹರಿಶ್ಚಂದ್ರನ ಕಥೆ**



ಅವಕಾಶ ಕೊಟ್ಟಿದ್ದೇನೆ. ಆಗ ಮಾತು ತಪ್ಪಿ ಏನಾದರೂ ನೆವನ ಹೇಳಿದರೆ ನಿನ್ನನ್ನು ಖಂಡಿತವಾಗಿಯೂ ಶಪಿಸುತ್ತೇನೆ. ಎಚ್ಚರ!" ಎಂದು ಹೇಳಿ ಹೊರಟು ಹೋದನು.

ಅಂದಿನಿಂದ ಹರಿಶ್ಚಂದ್ರನ ಮನಸ್ಸಿನೊಳಗೆ ಭಾರ ಬಿದ್ದಿತು, ಆದನ್ನು ಸಾಧ್ಯವಾದಷ್ಟು ಮಟ್ಟಿಗೆ ಮುಚ್ಚಿಟ್ಟುಕೊಂಡು ತನ್ನ ಮಗನಿಗೆ ಲೋಹಿತಾಕ್ಷನೆಂದು ನಾಮಕರಣ ಮಾಡಿ, ಚೆನ್ನಾಗಿ ವಿದ್ಯಾಭ್ಯಾಸ ಮಾಡಿಸಿದನು. ಸ್ವಲ್ಪ ದೊಡ್ಡವನಾದ ಕೂಡಲೇ ತಾನು ಬಲಿ ಪಶುವಾಗಿ ಸಾಯಲಿರುವ ಸಂಗತಿ ಲೋಹಿತಾಕ್ಷನಿಗೆ ಗೊತ್ತಾಯಿತು. ಅದರಿಂದ ಚಿಂತಿತನಾದ ಲೋಹಿತಾಕ್ಷನು ಉಪನಯನವಾದ ಕೂಡಲೇ ಒಂದು ದಿನ ಮನೆಯಿಂದ ಓಡಿಹೋಗಿ ಯಾರ ಕಣ್ಣಿಗೂ ಬೀಳದಂತೆ ಒಂದು ಬೆಟ್ಟದ ಗುಹೆಯೊಳಗೆ ಅಡಗಿಕೊಂಡನು. ಪಾಪ, ಅವನಿಗೆ ತಾನು ಮುದುಕನಾಗುವ ವರೆಗೂ ಬದುಕಬೇಕೆಂದು ಆಶೆ!

ಲೋಹಿತಾಕ್ಷನಿಗೆ ಉಪನಯನದ ಪ್ರಾಯ ಬಂದ ಮೇಲೆ ಒಂದು ದಿನ ವರುಣನು ಬಂದು ನರಮೇಧ ಮಾಡುವಂತೆ ಹರಿಶ್ಚಂದ್ರನ ಮುಂದೆ ಕುಳಿತನು. "ನಾನು ಹೇಗೆ ಮಾಡಲಿ ಸ್ವಾಮಿ? ನನ್ನ ಮಗನು ಎತ್ತಲೋ ಓಡಿಹೋಗಿದ್ದಾನೆ! ಏನು ಮಾಡುವುದೋ ಗೊತ್ತಾಗುವುದಿಲ್ಲವಲ್ಲಾ!" ಎಂದನು ಹರಿಶ್ಚಂದ್ರ.

"ಸುಳ್ಳುಹೇಳಿ ನನ್ನನ್ನು ಮೋಸಪಡಿಸುವಿಯಾ? ಹಿಡೀ ಶಾಪ! ನಿನಗೆ ಜಲೋದರವೆಂಬ ವ್ಯಾಧಿಯುಂಟಾಗಲಿ!" ಎಂದು ವರುಣನು ಹರಿಶ್ಚಂದ್ರನನ್ನು ಶಪಿಸಿ ಹೊರಟುಹೋದನು.

ಶಾಪವು ಕೂಡಲೇ ಪ್ರತಿಫಲಿಸಿತು. ಹರಿಶ್ಚಂದ್ರನು ಜಲೋದರ ವ್ಯಾಧಿಯಿಂದ ಸಂಕಟ ಪಡುತ್ತ ಬಿದ್ದನು. ಅದರ ಮೇಲೆ ಮಗನನ್ನು ಕಾಣದ ದುಃಖ ಬೇರೆ ಆತನನ್ನು ಕಾಡುತಿತ್ತು.

ಹೀಗಿರುವಾಗ ಬೆಟ್ಟದ ಗುಹೆಯಲ್ಲಿ ರಹಸ್ಯವಾಗಿ ಜೀವಿಸಿಕೊಂಡಿದ್ದ ಲೋಹಿತಾಕ್ಷನಿಗೆ ಒಂದು ದಿನ ದಾರಿಹೋಕನೊಬ್ಬನು ಕಣ್ಣಿಗೆ ಬಿದ್ದನು. ಆ ದಾರಿಹೋಕನು ಲೋಹಿತಾಕ್ಷನನ್ನು ನೋಡಿ ಗುರುತು ಹಿಡಿದು, "ಇಲ್ಲಿರುವಿಯಾ? ನಿನ್ನ ತಂದೆ ರೋಗದಿಂದ ನರಳಿಕೊಂಡು ಬಿದ್ದಿರುವಾಗ, ಅದರ ಗೊಡವೆಯಿಲ್ಲದೆ ತಿರುಗುವ ನಿನ್ನಂಥ ಮಗನು ಬೇರೆಲ್ಲಿಯೂ ಇರಲಾರನು!" ಎಂದನು.

ಆ ಮಾತು ಲೋಹಿತಾಕ್ಷನ ಮರ್ಮಕ್ಕೆ ತಾಗಿತು. ರೋಗದಲ್ಲಿರುವ ತಂದೆಯನ್ನು ಹೋಗಿ ನೋಡಲು ಹೊರಟು ನಿಂತನು. ಆಗ ದೇವೇಂದ್ರನು ಬ್ರಾಹ್ಮಣ ವೇಷದಿಂದ ಅವನ ಮುಂದೆ ಬಂದು, ಅವನ ಮೇಲೆ ತುಂಬಾ ದಯವುಳ್ಳವನ ಹಾಗೆ, "ತಂದೆಯ ಬಳಿಗೆ ಹೋಗಿ ಏಕೆ ಸಾಯುವಿಯಪ್ಪಾ? ನನ್ನ ಮಾತು ಕೇಳು. ನಿನ್ನ ತಂದೆ ಜಲೋದರ ವ್ಯಾಧಿಯಿಂದ ಕಷ್ಟ ಪಡುತ್ತಿದ್ದಾನೆ. ಅದರಿಂದ ಬಿಡುಗಡೆ ಹೊಂದಲು ನಿನ್ನನ್ನು ವರುಣನಿಗೆ ಬಲಿಕೊಡಬೇಕು. ನೀನು

ಹೋದರೆ ಅದನ್ನೇ ಮಾಡುತ್ತಾನೆ. ನಿನ್ನನ್ನು ಬಲಿ ಗೊಡುವೆನೆಂದು ನೀನು ಹುಟ್ಟುವುದಕ್ಕೆ ಮೊದಲೇ ವರುಣನಿಗೆ ಮಾತು ಕೊಟ್ಟವನು ನಿನ್ನ ತಂದೆ. ಅಂಥವನ ಬಳಿಗೆಹೋದರೆ ಮುಗಿದೇಹೋಗುತ್ತೆ ನಿನ್ನಕಥೆ." ಎಂದು ಹೇಳಿ ಅವನ ಮನಸ್ಸನ್ನು ಹಿಂದಿರುಗಿಸಿದನು.



ಆದರೂ ಲೋಹಿತಾಕ್ಷನಿಗೆ ಮತ್ತೊಂದುಸಾರಿ ತಂದೆಯನ್ನು ನೋಡುವುದೇ ನ್ಯಾಯವೆಂದು ತೋರಿತು. ಆಗಲೂ ಇಂದ್ರನು ಬಂದು ಅವನನ್ನು ತಪ್ಪಗಿಡಿಸಿದನು. ಹೀಗೆ ಅನೇಕಸಾರಿ ನಡೆಯಿತು.

ಒಂದು ದಿನ ವ್ಯಾಧಿ ಪೀಡಿತನಾದ ಹರಿಶ್ಚಂದ್ರನು ತನ್ನ ಕುಲಗುರುವಾದ ವಸಿಷ್ಠನೊಂದಿಗೆ, "ನೀವಾದರೂ ನನ್ನನ್ನು ಈ ಜಲೋದರ ವ್ಯಾಧಿ ಯಿಂದ ಕಾಪಾಡಬಾರದೆ ? " ಎಂದು ಕೇಳಿದನು.

ಅದನ್ನು ಕೇಳಿ ವಸಿಷ್ಠನು. "ರಾಜನೇ ಇದಕ್ಕೆ ಒಂದೇ ಒಂದು ಉಪಾಯ ಮಾತ್ರವಿದೆ. ಮಗಂದಿರಲ್ಲಿ ಹದಿಮೂರು ಬಗೆಯುವರು ಇದ್ದಾರೆ. ಅವುಗಳಲ್ಲಿ ಕ್ರೀತಪುತ್ರನೆಂದರೆ, ಹಣಕೊಟ್ಟು ತೆಗೆದುಕೊಳ್ಳುವ ಮಗ. ಆದುದರಿಂದ ನೀನು ಯಾವನಾದರೊಬ್ಬ ಹುಡುಗನನ್ನು ಹಣಕೊಟ್ಟು ಕೊಂಡುಕೊಂಡು, ಅವನನ್ನು ಬಲಿ ಪಶುವಾಗಿಟ್ಟು ಯಜ್ಞ ಮಾಡಿಬಿಡು. ವರುಣನಿಗೆ ಪ್ರೀತಿಯಾಗುತ್ತದೆ. ಈ ವ್ಯಾಧಿ ನಿನ್ನನ್ನು ಬಿಟ್ಟು ಹೋಗುತ್ತದೆ. ಸ್ವಂತ ಮಗನು ಓಡಿ ಹೋದುದರಿಂದ, ಇಂತಹ ಮಗನಿಂದ ನೀನು ಶಾಪ ಮುಕ್ತನಾಗಬಹುದು " ಎಂದನು.

ವಸಿಷ್ಠನ ಮಾತಿನ ಪ್ರಕಾರ ಹರಿಶ್ಚಂದ್ರನು ತನ್ನ ಮಂತ್ರಿಗಳನ್ನು ಕರೆದು, "ಯಾವನಾದರೂ ಬ್ರಾಹ್ಮಣನು ತನ್ನ ಮಗನನ್ನು ಮಾರುವಹಾಗಿದ್ದರೆ, ಅವನು ಕೇಳುವಷ್ಟು ಧನವನ್ನು ಕೊಟ್ಟು ತೃಪ್ತಿಬಡಿಸಿ ಬಲಿಯ ಬಾಲನನ್ನು ತೆಗೆದುಕೊಂಡು ಬನ್ನಿ " ಎಂದು ಅಪ್ಪಣೆ ಕೊಟ್ಟನು.

ಅವರು ಊರೂರು ತಿರುಗುತ್ತ ಅನೇಕ ಗ್ರಾಮ ಗಳಲ್ಲಿ ಗಾಳಿಸುತ್ತ ಕಟ್ಟಕಡೆಗೆ ಅಜೀಗರ್ತನೆಂಬ ತುಂಬ ದರಿದ್ರನಾದ ಬ್ರಾಹ್ಮಣನನ್ನು ಮಾತಾಡಿಸಿ, ಸಂಗತಿ ಯನ್ನು ತಿಳಿಸಿದರು. ಅಜೀಗರ್ತನು ತನ್ನ ಕುಮಾರರಲ್ಲಿ ನಡುವಿನವನಾದ ಶುನಶ್ಶೇಪ ಎಂಬ ಹುಡುಗನನ್ನು ಮಾರಲು ಸಿದ್ಧನಾದನು. ಮಂತ್ರಿಗಳು ಅವನು ಕೇಳಿದಷ್ಟು ಹಣವನ್ನು ಕೊಟ್ಟು, ಶುನಶ್ಶೇಪನನ್ನು ಕೊಂಡುಕೊಂಡು ಕರೆದುಕೊಂಡು ಹೋದರು.

ನರಬಲಿಗೆ ತಕ್ಕ ಬಾಲಕನು ಸಿಕ್ಕಿದನೆಂಬ ಸಂತೋಷ ದಲ್ಲಿ ಹರಿಶ್ಚಂದ್ರನು ಯಜ್ಞಸನ್ನಾಹಗಳನ್ನು ಮಾಡಲು ತೊಡಗಿದನು. ಋತ್ವಿಕ್ಕುಗಳು ಬಂದು ವಿಧಿಪ್ರಕಾರ ಯಜ್ಞವನ್ನು ಪ್ರಾರಂಭಿಸಿದರು. ಶುನಶ್ಶೇಪನನ್ನು ಯಾಗಪಶುವಿನಹಾಗೆ ಯೂಪಸ್ತಂಭಕ್ಕೆ ಕಟ್ಟಿದರು. ಅವನು ಬಾಯಿಬಿಟ್ಟು ಕಲ್ಲುಕರಗುವಂತೆ ಅಳುತ್ತಿದ್ದನು. ಅದನ್ನು ನೋಡಿ ಅಲ್ಲಿಗೆ ಬಂದಿದ್ದ ವಿಶ್ವಾಮಿತ್ರನಿಗೆ




ಮನಸ್ಸು ಕರಗಿತು. ವಿಶ್ವಾಮಿತ್ರನು ಹರಿಶ್ಚಂದ್ರನೊಂದಿಗೆ ಹೀಗೆಂದನು :

"ರಾಜನೇ ! ಈ ಬ್ರಾಹ್ಮಣ ಬಾಲಕನನ್ನು ಏತಕ್ಕಾಗಿ ಕೊಲ್ಲುವಿ? ಬಿಟ್ಟುಬಿಡು ಹೋಗಲಿ. ಅವನು ಅಳುವುದನ್ನು ಕೇಳುವಾಗ ನನಗೆ ಸಹಿಸಲಾಗುವುದಿಲ್ಲ. ಪೂರ್ವದಲ್ಲಿ ನಿನ್ನವಂಶದ ರಾಜರು ಇತರರಿಗಾಗಿ ತಮ್ಮ ಪ್ರಾಣಗಳನ್ನೇ ಧಾರೆಯೆರೆದಿದ್ದಾರೆ. ನಿನ್ನ ರೋಗವನ್ನು ವಾಸಿಗೊಳಿಸಿಕೊಳ್ಳುವುದಕ್ಕಾಗಿ ಇಂತಹ ಹೀನ ಕೆಲಸ ಮಾಡಿಕೊಳ್ಳುವುದುಂಟೇ? ನಿನ್ನ ರೋಗ ಬಾಧೆಯನ್ನು ನಾನೇ ನಿವಾರಿಸಿ ಬಿಡುತ್ತೇನೆ. ಈ ಹುಡುಗನನ್ನು ಬಿಟ್ಟುಬಿಡು. ಎಲ್ಲರಿಗೂ ಅವರವರ ಜೀವ ಸವಿಯಾದುದೇ. ನೀನು ಎಂತಹ ಪಾಪಿಷ್ಠ ಬುದ್ಧಿಯವನೋ ! ನಿನಗೆ ಗುಂಡಿಗೆಯಿಲ್ಲ."

ಈ ವಿಧವಾಗಿ ವಿಶ್ವಾಮಿತ್ರನು ಎಷ್ಟು ಹೇಳಿದರೂ ಹರಿಶ್ಚಂದ್ರನು ಶುನಶ್ಶೇಪನನ್ನು ಬಿಡುಗಡೆಮಾಡಲು ಒಪ್ಪಲಿಲ್ಲ. ಆಗ ವಿಶ್ವಾಮಿತ್ರನು ಶುನಶ್ಶೇಪನ ಬಳಿಗೆ ಹೋಗಿ ಸಮಾಧಾನ ಪಡಿಸಿ, ವರುಣದೇವನಿಗೆ ಇಷ್ಟವಾದ ಒಂದು ಮಂತ್ರವನ್ನು ಉಪದೇಶಿಸಿ ಅದನ್ನು ಜಪಿಸಿಕೊಂಡಿರುವಂತೆ ಹೇಳಿದನು. ಅದರಿಂದ ಪ್ರೀತನಾದ ವರುಣನು ಶುನಶ್ಶೇಪನನ್ನು ಬಲಿ ತೆಗೆದು ಕೊಳ್ಳಲಾರನೆಂದು ನಂಬುಗೆ ಕೊಟ್ಟನು.

ಶುನಶ್ಶೇಪನು ಆ ಮಂತ್ರವನ್ನು ಜಪಿಸಿಕೊಳ್ಳಲು ತೊಡಗಿದನು. ಅದರಿಂದ ವರುಣದೇವನಿಗೆ ಪರಮ ಸಂತೋಷವಾಯಿತು. ಅವನು ಬೇಗದಲ್ಲೇ ಬಂದು ರಾಜನನ್ನು ರೋಗಮುಕ್ತ ಮಾಡಿ ಹುಡುಗ ಲೋಹಿತಾಕ್ಷನನ್ನು ಬಿಡುಗಡೆ ಮಾಡಿ ಹೊರಟುಹೋದನು.

ಈ ವಿಧವಾಗಿ ಶುನಶ್ಶೇಪನು ಬದುಕಿ ಉಳಿಯಲು ವಿಶ್ವಾಮಿತ್ರನು ಸಹಾಯ ಮಾಡಿದನು. ಆದರೆ ರಾಜರ್ಷಿಯಾದ ವಿಶ್ವಾಮಿತ್ರನು ಹರಿಶ್ಚಂದ್ರನು ತನ್ನ ಮಾತು ಕೇಳಲಿಲ್ಲವೆಂಬ ಹಗೆಯ ನೆನಪನ್ನು ಬಿಡಲಾರದೆ ಮನಸ್ಸಿನೊಳಗೇ ಹುದುಗಿಸಿಕೊಂಡಿದ್ದನು.

ಹೀಗಿರುವಾಗ ಅದಕ್ಕೂ ಒಂದು ಕಾಲ ಬೇಗದಲ್ಲೇ ಬಂತು. ಒಂದು ದಿನ ಹರಿಶ್ಚಂದ್ರನು ಕೌಶಿಕೀ ನದಿಯ ತೀರದಲ್ಲಿ ಬೇಟೆಯಾಡುತ್ತಿದ್ದನು. ಅಲ್ಲಿ ಕಣ್ಣಿಗೆ ಬಿದ್ದ ಒಂದು ದೊಡ್ಡ ಕಾಡು ಹಂದಿಯನ್ನು ಓಡಿಸಿಕೊಂಡು ಹೋಗುತ್ತಿದ್ದಂತೆ ಮಧ್ಯಾಹ್ನದ ಹೊತ್ತುಬಂತು. ವಿಶ್ವಾಮಿತ್ರನು ಒಬ್ಬ ಮುದಿಬ್ರಾಹ್ಮಣನ ರೂಪದಲ್ಲಿ ಹರಿಶ್ಚಂದ್ರನಿಗೆ ಮೋಸಮಾಡಿದನು. ಹರಿಶ್ಚಂದ್ರನ ರಾಜ್ಯಮೊದಲಾದ ಸರ್ವಸ್ವವೂ ವಿಶ್ವಾಮಿತ್ರನ ವಶವಾದುವು.

ತರುವಾಯ ಆಕಸ್ಮಿಕವಾಗಿ ಒಂದು ಕಡೆಯಲ್ಲಿ ವಸಿಷ್ಠನು ವಿಶ್ವಾಮಿತ್ರನನ್ನು ನೋಡಿ, "ವಿಶ್ವಾಮಿತ್ರಾ ! ನೀನು ಬಹಳ ಹೀನವಾದ ಮನಸ್ಸಿನವನು. ನೀತಿಯ ಭಯವೇ ನಿನಗಿಲ್ಲ. ನನ್ನ ಯಜಮಾನನಾದ ಹರಿಶ್ಚಂದ್ರನನ್ನು ನಿಷ್ಕಾರಣವಾಗಿ ಮೋಸಪಡಿಸಿ ಕಾಡಿನಪಾಲು ಮಾಡಿದಿಯಲ್ಲ! ನೀನು ತಾಪಸರೊಳಗೇ ಅಧಮ ತಾಪಸಿ. ನಿನ್ನ ತಪಸ್ಸು

ಕೇವಲ ಬಕಧ್ಯಾನವೆ! ನೀನು ಕೊಕ್ಕರೆಯಾಗಿ ಹೋಗು!" ಎಂದು ಶಾಪಕೊಟ್ಟನು.

"ಸರಿ. ನಾನೆಷ್ಟು ಕಾಲ ಕೊಕ್ಕರೆಯಾಗಿರುವೆನೋ ನೀನೂ ಅಷ್ಟುಕಾಲ ಕೊಕ್ಕರೆಯಾಗಿರು!" ಎಂದು ವಿಶ್ವಾಮಿತ್ರನು ವಸಿಷ್ಠನಿಗೆ ಪ್ರತಿ ಶಾಪ ಕೊಟ್ಟುಬಿಟ್ಟನು.

ಅಂದಿನಿಂದ ವಸಿಷ್ಠ ವಿಶ್ವಾಮಿತ್ರರಿಬ್ಬರೂ ಪಕ್ಷಿ ರೂಪವನ್ನು ಧರಿಸಿ, ಹಿಮಾಲಯದ ಮಾನಸತೀರ್ಥದ ಸಮೀಪವಿರುವ ಮರಗಳ ಮೇಲೆ ವಾಸ ಮಾಡುತ್ತ, ದಿನಾ ತಮ್ಮೊಳಗೆ ಹೊಡೆದಾಡಿಕೊಳ್ಳುತ್ತ, ಪರಸ್ಪರರ ನೆತ್ತರನ್ನು ನೋಡಿ ಸಂತೋಷಪಡುತ್ತಲ್ಲಿದ್ದರು. ಎಂತಹ ಮಹರ್ಷಿಗಳಿಗಾದರೂ ಅಹಂಕಾರವು ಅಳಿಯಲಾರದೆಂಬುದು ಅದಕ್ಕೇ!

ಹೀಗೆ ಮಹರ್ಷಿಗಳಿಬ್ಬರು ಪರಸ್ಪರ ಹಿಂಸೆ ಮಾಡಿ ಕೊಂಡಿರುವುದನ್ನು ನೋಡಿ ಬ್ರಹ್ಮನಿಗೆ ಸಹಿಸಲಾಗ ಲಿಲ್ಲ. ಅವನು ಬಂದು ಅವರಿಬ್ಬರ ಶಾಪಗಳನ್ನೂ ತೀರಿಸಿ ಸಮಾಧಾನ ಪಡಿಸಿ ಕಳುಹಿಸಿಕೊಟ್ಟನು.

ಆದರೂ ವಸಿಷ್ಠನು ಕೋಪಬಿಡದೆ ನಿಮಿಯನ್ನು ಶಪಿಸಿ ಅವನಿಂದ ಬೇರೆ ಪ್ರತಿಶಾಪಹೊಂದಿದನು. ಅದುಹೇಗೆ ನಡೆಯಿತೆಂದರೆ,

ಇಕ್ಷ್ವಾಕು ರಾಜನ ಮಗನಾದವನು ನಿಮಿ. ಅವನು ತುಂಬಾ ಧರ್ಮಾತ್ಮನು. ಒಳ್ಳೆಯ ವರ್ತನೆಯುಳ್ಳವನು. ಅವನು ಬ್ರಾಹ್ಮಣರ ಸೌಕರ್ಯಕ್ಕಾಗಿ ಗೌತಮಾಶ್ರಮದ ಸಮೀಪದಲ್ಲಿ ಸುಭಿಕ್ಷವಾದ ಜಯಂತಪುರವೆಂಬ ಊರನ್ನು ನಿರ್ಮಿಸಿಕೊಟ್ಟನು.

ಅದುನಡೆದು ಸ್ವಲ್ಪ ಕಾಲವಾದ ಮೇಲೆ ನಿಮಿಗೆ ದೀರ್ಘಕಾಲದವರೆಗೆ ನಡೆಯತಕ್ಕ ಒಂದು ಯಾಗವನ್ನು ಮಾಡಬೇಕೆಂದು ಇಚ್ಛೆಯುಂಟಾಯಿತು. ಅದಕ್ಕಾಗಿ ಅವನು ತನ್ನ ತಂದೆಯ ಅನುಮತಿಯನ್ನು ಪಡೆದು, ಮಹಾಮುನಿಗಳು ಹೇಳಿದ ಪ್ರಕಾರ ಅದಕ್ಕೆ ಬೇಕಾದ ಸಾಧನ ಸಾಮಗ್ರಿಗಳನ್ನು ಸೇರಿಸ ತೊಡಗಿದನು. ಭೃಗು, ಅಂಗಿರಸ, ಗೌತಮ, ಪುಲಸ್ತ್ಯ, ಋಚೀಕ, ಪುಲಹರಂತಹ ಮಹಾಮುನಿಗಳನ್ನು ಆಹ್ವಾನಿಸಿದನು. ತಮ್ಮ ಕುಲಗುರುವಾದ ವಸಿಷ್ಠನೊಂದಿಗೆ, "ಅಯ್ಯಾ, ನಾನು ಮಹಾದೇವಿಯನ್ನು ಕುರಿತು ಐದು ಸಾವಿರ ವರ್ಷಗಳವರೆಗೆ ನಡೆಯುವ ಯಜ್ಞಮಾಡಲು ಸಂಕಲ್ಪಿಸಿ ಎಲ್ಲಾ ಏರ್ಪಾಡು ಮಾಡಿದ್ದೇನೆ. ನೀವು ನನ್ನಿಂದ ಆ ಯಜ್ಞ ಮಾಡಿಸಬೇಕು" ಎಂದು ಕೇಳಿಕೊಂಡನು.



ಅದಕ್ಕೆ ವಸಿಷ್ಠನು, "ಇಂದ್ರನು ಕೂಡಾ ನನ್ನಿಂದ ಜಗದಂಬೆಯನ್ನು ಉದ್ದೇಶಿಸಿ ಯಜ್ಞ ಮಾಡಿಸಲು ಕರೆದಿದ್ದಾನೆ. ಅದು ಐನೂರು ವರ್ಷಗಳಲ್ಲಿ ಪೂರ್ಣವಾಗುತ್ತದೆ. ಅದನ್ನು ಮುಗಿಸಿ ಬಂದು ನಿನ್ನಿಂದ ಯಜ್ಞ ಮಾಡಿಸುತ್ತೇನೆ. ಅಷ್ಟರವರೆಗೆ ತಾಳಿಕೊಂಡಿರು" ಎಂದು ನಿಮಿಯೊಂದಿಗೆ ಹೇಳಿದನು.

ಎಲ್ಲರಿಗೂ ಆಹ್ವಾನ ಕಳುಹಿಸಿದ್ದಾಯಿತು. "ಋಷಿ ಮುನಿಗಳೆಲ್ಲರೂ ಬಂದು ಸೇರುತ್ತಿದ್ದಾರೆ. ನಮ್ಮ



ಸೂರ್ಯ ವಂಶಕ್ಕೆ ಪುರೋಹಿತರಾಗಿರುವ ನೀವು ಹೀಗೆ ಹೇಳುವುದು ನ್ಯಾಯವೇ? ಇಂದ್ರನಿಂದ ಬರುವ ಧನಲೋಭದಿಂದಲೇ ಹೀಗೆ ಮೋಸ ಮಾಡುವಿರಿ ಹೌದಾ?" ಎಂದನು ನಿಮಿ.

ಆದರೂ ವಸಿಷ್ಠನು ಲಕ್ಷ್ಯಮಾಡಲಿಲ್ಲ. ಇಂದ್ರನಿಂದ ಯಜ್ಞಮಾಡಿಸಲು ಹೊರಟೇ ಹೋದನು. ಆಗ ನಿಮಿ ಗೌತಮನನ್ನು ಮುಖ್ಯ ಪುರೋಹಿತನನ್ನಾಗಿಟ್ಟುಕೊಂಡು ಅಂಬಾದೇವಿಯನ್ನು ಕುರಿತು ಜಯಪ್ರದವಾಗಿ ಯಜ್ಞವನ್ನು ಮಾಡುತ್ತ, ಎಲ್ಲರಿಗೂ ದಾನ ಧರ್ಮ ದಕ್ಷಿಣೆಗಳನ್ನು ಕೊಡುತ್ತಿದ್ದನು.

ಅಷ್ಟರೊಳಗೆ ವಸಿಷ್ಠನು ಇಂದ್ರನಿಂದ ಯಜ್ಞ ಮಾಡಿಸಿ ಮುಗಿಸಿ, ಪುಷ್ಕಲವಾಗಿ ಸಿಕ್ಕಿದ ದಕ್ಷಿಣೆಯನ್ನು ತೆಗೆದುಕೊಂಡು ಯಜ್ಞ ದೀಕ್ಷೆಯಲ್ಲಿರುವ ನಿಮಿಯನ್ನು ನೋಡಲು ಬಂದನು. ಆ ಸಮಯದಲ್ಲಿ ನಿಮಿ ವಿರಾಮ ವೇಳೆಯ ವಿಶ್ರಾಂತಿಯಲ್ಲಿ ನಿದ್ರಿಸಿಕೊಂಡಿದ್ದನು. ವಸಿಷ್ಠನಿಗೆ ನಿಮಿಯ ದರ್ಶನ ಸಿಗಲಿಲ್ಲ.

ವಸಿಷ್ಠನಿಗೆ ಬಹಳ ಕೋಪ ಬಂತು. ಕುಲಗುರುವೂ ಕುಲ ಪುರೋಹಿತನೂ ಆದ ತನ್ನನ್ನು ಅಲಕ್ಷ್ಯಪಡಿಸಿ, ತನ್ನ ಪದವಿಯನ್ನು ಇನ್ನೊಬ್ಬರಿಗೆ ನಿರ್ಭಯವಾಗಿ ಕೊಟ್ಟು ಯಜ್ಞಮಾಡಿಸುವುದು ಮಾತ್ರವಲ್ಲದೆ, ತಾನು ನೋಡಲು ಬಂದೆನೆಂದು ತಿಳಿದರೂ ನಿದ್ದೆಯ ನೆಪ ಹಿಡಿದು ನೋಡಲಾಗುವುದಿಲ್ಲವೆಂದು ಅವಮಾನಿಸುವನೆ? ಎಂದುಕೊಂಡು "ನಿಮಿಯ ದೇಹವು ನೆಲಕ್ಕೆ ಬೀಳಲಿ! ನಿಮಿ ವಿದೇಹನಾಗಿ ಹೋಗಲಿ!" ಎಂದು ಶಪಿಸಿಬಿಟ್ಟನು!

ವಸಿಷ್ಠನು ನಾಲ್ಕುಮಂದಿಗೆ ಕೇಳುವಂತೆ ಹೇಳಿದ ಶಾಪ ವಾಕ್ಯವನ್ನು ಕೇಳಿ, ಸೇವಕರು ಓಡಿ ಹೋಗಿ ನಿಮಿಯನ್ನು ಎಬ್ಬಿಸಿ ವಸಿಷ್ಠನ ಶಾಪವನ್ನು ಕುರಿತು ಹೇಳಿದರು. ನಿಮಿ ಎದ್ದು ಬಂದು ವಸಿಷ್ಠನನ್ನು ನೋಡಿ, "ವಸಿಷ್ಠರೇ! ನೀವು ಬ್ರಹ್ಮದೇವನಿಗೆ ಸಮೀಪ ಬಂಧುಗಳಾಗಿದ್ದು, ಪಾಪ ಭೀತಿ ಸ್ವಲ್ಪವೂ ಇಲ್ಲದೆ ನನ್ನನ್ನು ಶಪಿಸಿದಿರಾ? ಧನ ಲೋಭದಿಂದ ನಿಮ್ಮ ನಂಬುಗೆಯ ಶಿಷ್ಯನಾದ ನನ್ನನ್ನು ಬಿಟ್ಟು ಹೊರಟುಹೋದವರು ನೀವು. ಧನವು ನಿಮಗೆ ನಾಚಿಗೆಯಿಲ್ಲದಂತೆ ಮಾಡಿತು. ನೀವು ಮಾಡಿದ ತಪ್ಪನ್ನು ನನ್ನ ತಲೆಗೆ ಕಟ್ಟಿ, ನನ್ನನ್ನು ಶಪಿಸಿದಿರಾ! ಇಷ್ಟೊಂದು ಕ್ರೋಧಮೂರ್ತಿಗಳಾದ ನಿಮ್ಮ ಶರೀರಕ್ಕೆ ನನ್ನ ಶರೀರಕ್ಕಾಗುವ ಗತಿಯೇ ಬರಲಿ!" ಎಂದು ಪ್ರತಿಶಾಪವಿತ್ತನು.

ವಸಿಷ್ಠನು ಬ್ರಹ್ಮನ ಬಳಿಗೆ ಹೋಗಿ, "ನಿಮಿ ಎಂಬ ರಾಜನು ನನ್ನ ಶರೀರವು ಬಿದ್ದು ಹೋಗುವಂತೆ ಶಪಿಸಿಬಿಟ್ಟನು. ನನ್ನ ಜ್ಞಾನವು ಬೇರೊಂದು ದೇಹದಲ್ಲಿ ನಿಂತಿರುವಂತಹ ದಾರಿಯನ್ನು ನೀನೇ ತೋರಿಸಬೇಕು" ಎಂದು ಬೇಡಿಕೊಂಡನು.

ಅದಕ್ಕೆ ಬ್ರಹ್ಮನು, "ಸರಿ, ನೀನು ಮಿತ್ರಾವರುಣ ದೇಹಾಂಶದವನಾಗಿ ಜ್ಞಾನವನ್ನು ದಕ್ಕಿಸಿಕೊಂಡಿರು" ಎಂದು ಅನುಗ್ರಹಿಸಿ ಕಳುಹಿಸಿದನು.

ವಸಿಷ್ಠನು ಬ್ರಹ್ಮನಿಗೆ ನಮಸ್ಕಾರಮಾಡಿ, ಅಲ್ಲಿಂದ ನೆಟ್ಟಗೆ ವರುಣ ಲೋಕಕ್ಕೆ ಹೋಗಿ, ತನ್ನ ಶರೀರ ವನ್ನು ಅಲ್ಲಿ ಬಿಟ್ಟುಕೊಟ್ಟು, ತನ್ನ ಪ್ರಾಣವನ್ನು ಮಿತ್ರಾವರುಣರೊಳಗೆ ಪ್ರವೇಶಗೊಳಿಸಿಕೊಂಡನು.

ಸ್ವಲ್ಪಕಾಲ ಕಳೆದ ಮೇಲೆ ಮಿತ್ರಾವರುಣರಿರು ವಲ್ಲಿಗೆ ಊರ್ವಶಿ ಬಂದಳು. ಅವಳ ಸೌಂದರ್ಯ ವನ್ನು ನೋಡಿ ಮಿತ್ರಾವರುಣರು ಮೋಹವಶರಾಗಿ ಅವಳೊಂದಿಗೆ ಸ್ವಲ್ಪಕಾಲ ಸಂಸಾರ ನಡೆಯಿಸಿದರು. ಅದರ ಫಲವಾಗಿ ಊರ್ವಶಿ ಅಗಸ್ತ್ಯನನ್ನೂ, ವಸಿಷ್ಠ ನನ್ನೂ ಹಡೆದಳು. ಅಗಸ್ತ್ಯನು ಹುಟ್ಟಿದ ಕೂಡಲೇ ತಪಸ್ಸಿಗೆ ಹೊರಟುಹೋದನು. ವಸಿಷ್ಠನನ್ನು ಇಕ್ಷ್ವಾಕು ರಾಜನು ತನ್ನ ಗುರುವನ್ನಾಗಿ ಸ್ವೀಕರಿಸಿಕೊಂಡನು. ಹೀಗೆ ವಸಿಷ್ಠನ ಪುನರವತಾರವಾಯಿತು.

ಅತ್ತ ನಿಮಿ ಕೂಡಾ ಅಕಾಲ ಮರಣಕ್ಕೆ ತುತ್ತಾಗುವ ಸ್ಥಿತಿಯಲ್ಲಿಯೂ ಯಜ್ಞ ಕಾರ್ಯವನ್ನು ಹೇಗೋ ಮುಗಿಸಿದನು. ಯಜ್ಞಭೋಕ್ತರು ಅವನ ಬಳಿಗೆ ಬಂದು, "ರಾಜಾ, ನಿನ್ನ ಯಜ್ಞವು ನಮಗೆಲ್ಲಾ ಪೂರ್ತಿ ತೃಪ್ತಿಯನ್ನುಂಟುಮಾಡಿತು. ನಿನ್ನ ಇಚ್ಛೆ ಏನಾದರೂ ಇದ್ದರೆ ಹೇಳು. ತೀರಿಸುತ್ತೇವೆ. ಮುಖ್ಯ ವಾಗಿ ನಿನಗೆ ನರದೇಹ ಬೇಕೆ ? ಸುರ ದೇಹ ಬೇಕೇ? " ಎಂದು ಕೇಳಿದರು. "ಮಹಾತ್ಮರೇ, ಶರೀರವಿರು ವಷ್ಟು ಕಾಲವೂ ಅದಕ್ಕೆ ಅಪಾಯವಿದ್ದೇ ಇರುತ್ತೆ. ನನಗೆ ಯಾವ ಶರೀರವೂ ಬೇಡ. ವಾಯು ರೂಪ ವನ್ನು ಅನುಗ್ರಹಿಸಿಕೊಡಿರಿ " ಎಂದನು ನಿಮಿ.

"ರಾಜಾ. ಅದು ನಮ್ಮ ಶಕ್ತಿಗೆ ಮೀರಿದೆ. ಅದ ಕ್ಕೊಂದು ದಾರಿ ಮಾತ್ರ ತೋರಿಸುತ್ತೇವೆ. ನೀನು ಜಗದಂಬೆಯನ್ನು ಪ್ರಾರ್ಥಿಸಿ ನಿನ್ನ ಇಚ್ಛೆಯನ್ನು ಕೇಳಿಕೋ. ಆ ಮಹಾ ತಾಯಿ ತೀರಿಸುತ್ತಾಳೆ" ಎಂದು ಮುನಿಗಳೂ ದೇವತೆಗಳೂ ನಿಮಿಗೆ ಹೇಳಿದರು.

ಅದರಂತೆ ನಿಮಿ ಜಗದಂಬೆಯನ್ನು ಪ್ರಾರ್ಥಿಸಲು ಈ ಮೊದಲೇ ಅವನ ಯಜ್ಞದಿಂದ ತೃಪ್ತಳಾದ ದೇವಿ ಪ್ರತ್ಯಕ್ಷಳಾಗಿ, "ನಿಮೀ! ನಿನ್ನ ಇಚ್ಛೆ ಕೈಗೂಡಿ ಶಾಶ್ವತವಾಗುವಿ. ನೀನು ಪ್ರಪಂಚದ ಸಮಸ್ತ ಭೂತ ಗಳ ಕಣ್ಣಿನಲ್ಲಿ ವಾಸವಾಗಿರುವಂತೆ ಮಾಡುತ್ತೇನೆ. ನಿನ್ನ ಮೂಲಕವಾಗಿ ಪ್ರಾಣಿಗಳಿಗೆ 'ನಿಮಿಷ' ವೆಂದು ಕಾಲಗಣನೆಯುಂಟಾಗಲಿ." ಎಂದು ಹೇಳಿದಳು.

ತರುವಾಯ ನಿಮಿ ದೇಹ ಬಿಟ್ಟು ವಿದೇಹನಾಗಿ ನಿಮಿಷ ಕಾರಣನಾದನು. ಮುನಿಗಳು ನಿಮಿಯ ದೇಹವನ್ನು ಮಥಿಸಿ ಜನಕನೆಂಬವನನ್ನು ಹುಟ್ಟಿ ಸಿದರು. ವಿದೇಹನಾದ ನಿಮಿಯ ಮಗನಾದುದರಿಂದ ಅವನು ವಿದೇಹನೆಂಬ ಹೆಸರಿಗೂ ಪಾತ್ರನಾದನು. ಅವನ ರಾಜಧಾನಿಯ ಹೆಸರು ಮಿಥಿಲೆ. ಗಂಗಾ ತೀರದಲ್ಲಿ ಈ ರಾಜ್ಯವಿದೆ. ಆ ರಾಜ್ಯದ ಹೆಸರೂ ವಿದೇಹವೆಂದಾಯಿತು.





# ವಿಚಿತ್ರ ವಿವಾಹ

**ಪೂ**ರ್ವಕಾಲದಲ್ಲಿ ಪಾಟಲೀಪುತ್ರ ನಗರ ಮಧ್ಯದಲ್ಲಿ ಧನವಂತನಾದ ಒಬ್ಬ ಬ್ರಾಹ್ಮಣನು ವಾಸವಾಗಿದ್ದನು. ಆ ಬ್ರಾಹ್ಮಣನಿಗೆ ಕೇಸಟನೆಂಬ ಕುಮಾರನಿದ್ದನು. ಅವನದು ಮೋಹನಾಕಾರವಾದ ರೂಪವಾಗಿತ್ತು.

ಅವನಿಗೆ ಮದುವೆಯ ವಯಸ್ಸು ಬಂತು. ತಾನು ಮದುವೆಯಾಗಬೇಕೆಂಬ ಕೋರಿಕೆ ಅವನಿಗೆ ಬಂದರೂ, ತನ್ನ ರೂಪಕ್ಕೆ ತಕ್ಕ ಕನ್ಯೆಯನ್ನೇ ಮದುವೆಯಾಗ ಬೇಕೆಂದು ಆಶಿಸುತ್ತಿದ್ದನು. ಅಲ್ಲಿ ಸುತ್ತಮುತ್ತ ಎಲ್ಲಿಯೂ ತನ್ನ ರೂಪಕ್ಕೆ ತಕ್ಕ ಹುಡುಗಿ ಇಲ್ಲದಿದ್ದುದರಿಂದ, ಮದುವೆಯೇ ಬೇಡವೆಂದು ಎಲ್ಲರೊಂದಿಗೆ ಹೇಳಿ, ತೀರ್ಥಯಾತ್ರೆಗೆ ಹೋಗುವೆನೆಂದನು. ಹಾಗೆ ಯಾತ್ರೆಮಾಡುವಾಗ ತಕ್ಕ ಕನ್ಯೆ ದೊರೆತರೆ ಮದುವೆ ಮಾಡಿಕೊಳ್ಳಬೇಕೆಂಬ ಆಶೆ ಅವನ ಮನಸ್ಸಿನೊಳಗಿತ್ತು.

ಕೇಸಟನು ಬಹಳದಿನ ಪ್ರಯಾಣಮಾಡುತ್ತ ನರ್ಮದಾ ತೀರವನ್ನು ಸೇರಿದನು. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಯಾವುದೋ ಒಂದು ಮದುವೆ ದಿಬ್ಬಣದ ಗುಂಪು ಬಂದು ಸೇರಿತು. ಆ ಗುಂಪಿನ ನಾಯಕನಂತಿದ್ದ ಒಬ್ಬ ಮುದುಕ ಬ್ರಾಹ್ಮಣನು, ಕೇಸಟನ ಅಂದಚೆಂದಗಳನ್ನೂ, ಅವನು ಒಬ್ಬಂಟಿಯಾಗಿರುವುದನ್ನೂ ಗಮನಿಸಿ, ಅವನ ಹತ್ತಿರ ಬಂದು "ಅಪ್ಪಾ, ಹಿರಿಯನಾದ ನಾನೊಂದು ಸಹಾಯ ಕೇಳುತ್ತೇನೆ. ಮಾಡಬಲ್ಲೆಯಾ?" ಎಂದು ಬಹಳ ದೈನ್ಯತೆಯಿಂದ ಕೇಳಿದನು. ಮುದುಕನ ಮೇಲೆ ಮನಕರಗಿದ ಕೇಸಟನು "ಹೇಳಿರಲ್ಲ? ನನ್ನಿಂದಾದುದನ್ನು ಖಂಡಿತಾ ಮಾಡುತ್ತೇನೆ." ಎಂದನು.

"ನಾನು ಹೇಳೋದು ನಿನ್ನಿಂದ ಆಗುವಂಥಾದ್ದೇ. ಆ ಸಹಾಯದಿಂದ ನಿನಗಾಗುವ ನಷ್ಟ ಕೂಡಾ ಏನಿಲ್ಲ. ನನ್ನ ವಂಶವನ್ನು ಎತ್ತಿ ನಿಲ್ಲಿಸಿದ ಪುಣ್ಯ ನಿನಗೆ ದಕ್ಕುತ್ತದೆ." ಎಂದ ಮುದಿ ಬ್ರಾಹ್ಮಣ. ಅದೇ ಮಾತು ಕೊಟ್ಟೆನಲ್ಲಾ?" ಎಂದ ಕೇಸಟ.

"ಕೇಳಪ್ಪ. ನರ್ಮದೆಯ ಆಚೆಯ ತೀರದಲ್ಲಿ ರತ್ನದತ್ತನೆಂಬ ಬ್ರಾಹ್ಮಣನಿದ್ದಾನೆ. ಅವನಿಗೆ ರೂಪವತಿಯೆಂಬ ಅತ್ಯಂತ ಸುಂದರಿಯಾದ ಕುಮಾರಿ ಇದ್ದಾಳೆ. ಆ ಹುಡುಗಿಯನ್ನು ನನ್ನ ಮಗನಿಗೆ ಮದುವೆ ಮಾಡಿಸಲಿಕ್ಕೇ ನಾವೆಲ್ಲ ಹೊರಟಿದ್ದೇವೆ. ಆದರೆ ನನ್ನ ಮಗನನ್ನು ಅವರಾರೂ ನೋಡಲಿಲ್ಲ. ನೀನು ಎಷ್ಟೊಂದು ಸುಂದರನಾಗಿರುವಿಯೋ ಅವನು ಅಷ್ಟರ ಮಟ್ಟಿಗೆ ಕುರೂಪಿಯಾಗಿದ್ದಾನೆ. ಅವನನ್ನು ನೋಡಿದರೆ

**೨೫ ವರ್ಷಗಳ ಹಿಂದಿನ ಚಂದಮಾಮ ಕಥೆ**



ಮನೆಗೆ ಹೋಯಿತು. ಸಾಯಂಕಾಲವಾಯಿತು ಮಸಕು ಕತ್ತಲೆ ಬಿದ್ದಮೇಲೆ ಕೇಸಟನು ಸಂಧ್ಯಾವಂದನೆ ಮೊದಲಾದ ಕಾಲಕೃತ್ಯಗಳಿಗಾಗಿ ನದಿಯ ಒಳಿಗೆ ಹೋದನು. ಅಲ್ಲಿ ರಾಕ್ಷಸನೊಬ್ಬ ಅವನನ್ನು ಹಿಡಿದು ತಿನ್ನುವೆನೆಂದು ಹಟ ಹಿಡಿದನು. ಆಗ ಕೇಸಟನು, ತಾನು ಒಬ್ಬ ಬ್ರಾಹ್ಮಣನಿಗೆ ಸಹಾಯ ಮಾಡುವೆನೆಂದು ಮಾತು ಕೊಟ್ಟಿರುವುದಾಗಿಯೂ, ಆ ಕೆಲಸ ಮರುದಿನದಲ್ಲಿ ಮುಗಿದ ಮೇಲೆ ರಾತ್ರಿಯಲ್ಲಿ ಖಂಡಿತಾ ಬರುವುದಾಗಿಯೂ, ಆಗ ರಾಕ್ಷಸನು ತನ್ನನ್ನು ತಿನ್ನಬಹುದೆಂದೂ ಕೇಸಟನು ಹೇಳಿದನು.

"ಹೇಳಿದ ಮಾತು ತಪ್ಪುವುದಿಲ್ಲವೆಂದು ಹೇಗೆ ನಂಬಲಿ?" ಎಂದ ರಾಕ್ಷಸ.

"ಆಡಿ ತಪ್ಪುವವನಲ್ಲದಿದ್ದುದರಿಂದಲೇ ದುಷ್ಟನಾದ ಆ ಮುದಿ ಬ್ರಾಹ್ಮಣನಿಗೆ ಸಹಾಯಮಾಡಲು ಸಿದ್ಧನಾದೆನು." ಎಂದನು ಕೇಸಟ.

"ಸರಿ. ಹೋಗಿ ಬಾ. ನಿನ್ನ ಸತ್ಯಸಂಧತೆಯನ್ನು ಪರೀಕ್ಷೆಮಾಡಿ ನೋಡುತ್ತೇನೆ." ಎಂದು ರಾಕ್ಷಸನು ಮಾಯವಾದನು.

ಮರುದಿನ ಕೇಸಟನನ್ನು ವರನನ್ನಾಗಿ ಅಲಂಕಾರ ಮಾಡಿದರು. ವಿವಾಹವು ಸಕ್ರಮವಾಗಿ ನಡೆದು ಹೋಯಿತು. ರಾತ್ರಿಯಲ್ಲಿ ವಧೂವರರನ್ನು ಏಕಾಂತದ ಕೋಣೆಗೆ ಕಳುಹಿಸಿದರು. ಕೇಸಟನು ಮದುವೆಯ ಎಲ್ಲಾ ವಿಧಿಗಳಲ್ಲಿಯೂ ಕದಲುವ ಬೊಂಬೆಯಂತೆ ವರ್ತಿಸಿದನೇ ಹೊರತು ಯಾವುದರಲ್ಲಿಯೂ ಮನಸ್ಸು ಕೊಟ್ಟಿರಲಿಲ್ಲ. ಅಂತೆಯೇ ವಧುವಿನೊಂದಿಗೆ ಯಾವ ಮಾತೂ ಆಡದೆ ಸುಮ್ಮನೆ ಮಲಗಿದನು. ಇಷ್ಟೊಂದು ಸುಂದರನಾದ ಗಂಡನನ್ನು ಪಡೆದೆನೆಂದು ಸಂತೋಷಪಡುತ್ತಿದ್ದ ರೂಪವತಿ, ಗಂಡನಿಗೆ ತನ್ನ ಮೇಲೆ ಏಕೋ ಸಿಟ್ಟಾಗಿದೆ ಎಂದುಕೊಂಡು, ಏನೂ ತೋರದೆ ನಿದ್ರಿಸುವವಳ ಹಾಗೆ ಕಣ್ಣು ಮುಚ್ಚಿಕೊಂಡಿದ್ದಳು.

ರತ್ನದತ್ತನು ಹುಡುಗಿಯನ್ನು ಕೊಡಲಾರನು. ಆದುದರಿಂದ ನೀನು ನನ್ನ ಜತೆಯಲ್ಲಿ ಬರಬೇಕು. ನೀನೇ ನನ್ನ ಮಗನೆಂದು ಹೇಳುತ್ತೇನೆ. ನಿನ್ನನ್ನು ಮದುಮಗನನ್ನಾಗಿ ಮಾಡುತ್ತೇವೆ. ಹುಡುಗಿಯ ಕೊರಳಿಗೆ ನೀನೇ ತಾಳಿ ಕಟ್ಟಿಬಿಡು. ಮದುವೆಯ ಕ್ರಮಗಳೆಲ್ಲಾ ನಿನ್ನೊಂದಿಗೇ ಆಗಲಿ. ಎಲ್ಲಾ ಮುಗಿದು ಇಲ್ಲಿಂದ ಹೊರಡುವಾಗ ನಿನ್ನ ದಾರಿ ಹಿಡಿದು ನೀನು ಹೋಗಿಬಿಡಬೇಕು. ನೀನು ನಮಗೆ ಮಾಡಿದ ಈ ಉಪಕಾರಕ್ಕೆ ಪ್ರತಿಫಲವಾಗಿ ಸಾಕಷ್ಟು ಹಣವನ್ನೂ ಕೊಡುತ್ತೇನೆ." ಎಂದ ಆ ಬ್ರಾಹ್ಮಣ.

ಆ ಮುದುಕ ಬ್ರಾಹ್ಮಣನ ನೀಚತನವನ್ನು ನೋಡಿ ಕೇಸಟನಿಗೆ ದಿಗ್ಭ್ರಮೆಯಾಯಿತು. ಆದರೆ ಮುಂದಾಗಿ ಮಾತು ಕೊಟ್ಟಿರುವನಾದುದರಿಂದ ಮುದುಕ ಹೇಳಿದಂತೆ ಮಾಡಲು ಒಪ್ಪಲೇ ಬೇಕಾಯಿತು. ಆ ಗುಂಪಿನಲ್ಲಿ ಅವನು ಸೇರಿ, ಮದು ಮಗನಾದನು. ದಿಬ್ಬಣವು ವೈಭವದಿಂದ ನರ್ಮದೆಯನ್ನು ದಾಟಿ ವಧುವಿನ

ಮಧ್ಯ ರಾತ್ರಿಯ ಹೊತ್ತಿನಲ್ಲಿ ರೂಪವತಿ ಗಾಢ ನಿದ್ರೆಯಲ್ಲಿರುವಳೆಂದುಕೊಂಡು ಕೇಸಟನು, ಮೆಲ್ಲನೆ ಸದ್ದುಮಾಡದೆ ಎದ್ದು. ಕೋಣೆಯಿಂದ ಹೊರಗೆ ಹೊರಟು. ಯಾರಿಗೂ ಗೊತ್ತಾಗದ ಹಾಗೆ ನದೀ ತೀರಕ್ಕೆ ಹೋದನು. ಅವನನ್ನೇ ಗಮನಿಸಿಕೊಂಡಿದ್ದ ರೂಪವತಿ ತಾನು ಕೂಡಾ ಎದ್ದು, ತಲೆಗೆ ಸೆರಗಿನ ಮುಸುಗು ಹಾಕಿಕೊಂಡು ಸ್ವಲ್ಪ ದೂರದಲ್ಲಿ ಅವನನ್ನು ಅನುಸರಿಸಿಕೊಂಡು ಹೋದಳು.

ಕೇಸಟನನ್ನು ಕಾದುಕೊಂಡಿದ್ದ ರಾಕ್ಷಸನು ಅವನನ್ನು ಕಂಡ ಕೂಡಲೇ, "ಬಂದೆಯಾ ಯುವಕಾ! ಹೇಳಿದ ಮಾತು ತಪ್ಪದ ಸತ್ಯವಂತನೇ ನಿಜ. ನಿನ್ನಂಥವನನ್ನು ತಿಂದು ನಾನೂ ಪವಿತ್ರನಾಗುತ್ತೇನೆ. ಬಾ." ಎಂದು ಕೈ ಚಾಚಿದನು. ಆಗ ಇದನ್ನು ನೋಡಿ ರೂಪವತಿ ತಟ್ಟನೆ ಮುಂದೆ ಬಂದು ಕೂಗುತ್ತ, "ಅಯ್ಯೋ! ಇವರು ನನ್ನ ಪತಿ! ಜವಾಬ್ದಾರಿ ಹೊತ್ತವರು! ಅವರನ್ನು ಬಿಡಯ್ಯಾ!" ಎಂದಳು. "ನಿನ್ನೆಯಿಂದ ಹಸಿದು ಆತುರದಲ್ಲಿದ್ದೇನೆ. ಕೈಗೆ ಬಿದ್ದ ಆಹಾರವನ್ನು ಬಿಡು ಅಂದರೇನು ಅರ್ಥ? ದೂರಸರಿ!" ಎಂದನು ಕೋಪದಿಂದ ರಾಕ್ಷಸ.

"ನಿನಗೆ ಹಸಿವಾಗದ್ದರೆ ನನ್ನನ್ನು ತಿಂದು ಇವರನ್ನು ಬಿಟ್ಟುಬಿಡು. ಇವರನ್ನು ತಿಂದು ನನ್ನನ್ನು ಬಿಟ್ಟರೆ ನಾನು ಗತಿಯಿಲ್ಲದವಳಾಗುತ್ತೇನೆ. ನನ್ನನ್ನೇ ತಿನ್ನಯ್ಯ" ಎಂದಳು ರೂಪವತಿ. "ಅದಕ್ಕೆ ನಾನೇನು ಮಾಡಲಿ? ಹೋಗಿ ಎಲ್ಲಿಯಾದರೂ ಭಿಕ್ಷೆ ಬೇಡಿ ಬದುಕಿ ಕೊಂಡಿರು" ಎಂದ ರಾಕ್ಷಸ.

"ಅನಾಥಳಾದ ನನ್ನಂಥವಳಿಗೆ ಭಿಕ್ಷೆ ಹಾಕುತ್ತಾರೆ ಯಾರು?" ಎಂದು ರೂಪವತಿ ವಿಲಪಿಸಲು, "ಹಾಗೇನು? ನೀನು ಕೇಳಿದರೆ ಭಿಕ್ಷೆ ಹಾಕದವನು ತಲೆಯೊಡೆದು ಸಾಯುತ್ತಾನೆ. ವರಕೊಟ್ಟೆ. ಇನ್ನು ಹೋಗು!" ಎಂದ ರಾಕ್ಷಸ.

"ಹಾಗಾದರೆ ನಿನ್ನನ್ನೇ ಭಿಕ್ಷೆ ಕೇಳುತ್ತೇನೆ. ನನಗೆ ಪತಿಭಿಕ್ಷೆ ಕೊಡು!" ಎಂದಳು ರೂಪವತಿ.

ಆ ಮಾತು ಕೇಳಿ ರಾಕ್ಷಸನು ಕ್ಷಣಕಾಲ ಸ್ತಬ್ಧ ನಾದನು. ಅನಂತರ ಒಮ್ಮೆಗೇ ಅವನಿಗೆ ಹೊಟ್ಟೆ





ತುಂಬಿದಷ್ಟು ಆನಂದವಾಯಿತು. "ನೀನು ನನ್ನನ್ನು ಗೆದ್ದೆ! ತಕೋ ನಿನ್ನ ಗಂಡನನ್ನು! ಇವನಿಗೆ ಸರಿಯಾದ ಹೆಂಡತಿ ನೀನೇ! ನೀವಿಬ್ಬರೂ ಚಿರಕಾಲ ಸುಖವಾಗಿರಿ!" ಎಂದು ರಾಕ್ಷಸನು ಅವರಿಬ್ಬರನ್ನೂ ಹರಿಸಿ ಕತ್ತಲೆಯಲ್ಲಿ ಮಾಯವಾದನು.

ರೂಪವತಿಯ ಪತಿಭಕ್ತಿಯನ್ನು ನೋಡಿ ಕೇಸಟನಿಗೆ ತುಂಬಾ ಸಂತೋಷವಾಯಿತು. ಆದರೂ ಅವನು ಅವಳೊಂದಿಗೆ ನಿಜ ಸಂಗತಿಯನ್ನು ಹೇಳಲಿಲ್ಲ. ಬೆಳಗಾಗುವುದರೊಳಗೆ ಅವರಿಬ್ಬರೂ ತಮ್ಮ ಕೋಣೆಯನ್ನು ಸೇರಿದರು. ರಾತ್ರಿ ನಡೆದುದೊಂದೂ ಯಾರಿಗೂ ಗೊತ್ತಾಗಲಿಲ್ಲ.

ಮರುದಿನ ಭೋಜನೋಪಚಾರಗಳೆಲ್ಲ ಬೇಗ ಬೇಗನೇ ಮುಗಿದು, ವರನಕಡೆಯವರು ವಧುವನ್ನು ಕರೆದುಕೊಂಡು ಹೊರಟರು. ಕೃತಘ್ನನಾದ ಮುದುಕ ಬ್ರಾಹ್ಮಣನು, "ನದಿ ದಾಟುವವರೆಗೆ ನಾರಾಯಣ, ಮತ್ತೆ ಕೋರಾಯಣ" ಎಂಬ ಹಾಗೆ ಕೇಸಟನೊಂದಿಗೆ ಕೆಲಸ ಮುಗಿದುರಿಂದ, ಅವನ ಅಲಂಕಾರಗಳನ್ನೆಲ್ಲಾ ಕಿತ್ತುಕೊಂಡನು. ಅನಂತರ ತನ್ನವರನ್ನೆಲ್ಲಾ ಒಂದು ದೋಣಿಯಲ್ಲಿ ಏರಿಸಿ, ಮತ್ತೊಂದು ದೋಣಿಯಲ್ಲಿ ಕೇಸಟನನ್ನು ಏರಿಸಿದನು. ಆ ದೋಣಿಗಾರರಿಗೆ ಪುಷ್ಕಲವಾಗಿ ಹಣ ಕೊಟ್ಟು, ನಡೂ ನದಿಯಲ್ಲಿ ಆ ದೋಣಿಯನ್ನು ಮುಳುಗಿಸಿಬಿಡುವಂತೆ ಹೇಳಿದನು. ಕೇಸಟನನ್ನು ಉಸಿರಿತ್ತೆಲೂ ಬಿಡಲಿಲ್ಲ. ಅವನು ಬೇರೆ ದೋಣಿಯಲ್ಲಿ ಏರಿಕೊಂಡದ್ದು ಗುಂಪಿನಲ್ಲಿದ್ದ ರೂಪವತಿಗೂ ಗೊತ್ತಾಗಲಿಲ್ಲ. ಅವಳು ಕುಳಿತ ದೋಣಿ ಭದ್ರವಾಗಿ ಆಚೆಯ ತೀರ ಸೇರಿತು. ಹಿಂದಿನಿಂದ ಬಂದ ದೋಣಿ ನಡುನದಿಯಲ್ಲಿ ಮುಳುಗಿತು. ದೊಡ್ಡ ಈಜುಗಾರರಾದ ಆ ದೋಣಿಗಾರರು ಈಜಿ ಪಾರಾದರು.

ಪ್ರವಾಹವು ಬಲವಾಗಿದ್ದುದರಿಂದ ಕೇಸಟನು ಏರಿದ್ದ ದೋಣಿ ಮುಳುಗಿಕೊಂಡೇ ಬಹುದೂರದವರೆಗೆ ಹೋಯಿತು. ಕೇಸಟನು ನದಿಯೊಳಗೆ ಹೇಗೆ ಹೇಗೋ ಪೇಚಾಟಪಟ್ಟು, ಆಯುರ್ಬಲ ಗಟ್ಟಿಯಾಗಿದ್ದುದರಿಂದಲೇ ಎಲ್ಲಿಯೋ ನದಿಯ ತೀರದ ಮಣ್ಣಿನ ಮೇಲೆ ಬಿದ್ದು ಬದುಕಿದನು. ಮೆಲ್ಲನೆ ಎದ್ದು ಸುಧಾರಿಸಿಕೊಂಡು ನಡೆಯ ತೊಡಗಿದನು. ತನಗೆ ಮುದಿ ಬ್ರಾಹ್ಮಣನು ಮಾಡಿದ ಮೋಸಕ್ಕಿಂತಲೂ, ರೂಪವತಿಯಿಂದ ದೂರವಾಗಿ ಹೋದ ಚಿಂತೆಯೇ ಅವನನ್ನು ಹೆಚ್ಚು ಘಾಸಿಪಡಿಸುತಿದ್ದಿತು.

ರೂಪವತಿಯನ್ನು ಕರೆದುಕೊಂಡು ಹೋಗುತ್ತಿದ್ದವರೆಲ್ಲ ಸುಖವಾಗಿ ನದಿ ದಾಟಿ ಕಾಲು ನಡಿಗೆಯಲ್ಲಿ ಹೋಗ ತೊಡಗಿದರು. ಆಗ ರೂಪವತಿ ಮುದಿ ಬ್ರಾಹ್ಮಣನ ಬಳಿಗೆ ಹೋಗಿ, "ಮಾವಯ್ಯಾ, ಎಲ್ಲರೂ ಇದ್ದಾರಲ್ಲಾ? ಅವರೆಲ್ಲಿ? ಕಾಣುವುದಿಲ್ಲವೇಕೆ?" ಎಂದು ಕೇಳಿದಳು.

"ಯಾರು, ನಿನ್ನ ಗಂಡನನ್ನು ತಾನೇ ಕೇಳುವೆ? ಇಕೋ ಇದ್ದಾನಲ್ಲ?" ಎನ್ನುತ್ತ ಮುದಿ ಬ್ರಾಹ್ಮಣನು

ಕುರೂಪಿಯಾದ ತನ್ನ ಮಗನನ್ನು ಮುಂದೆ ಕರೆದು, "ನಿನ್ನ ಹೆಂಡತಿಯ ಕೈ ಹಿಡಿದು ಕರೆದುಕೊಂಡು ನಡಿಯೋ" ಎಂದನು.

ರೂಪವತಿಗೆ ಗಾಬರಿಯೂ ಕೋಪವೂ ದುಃಖವೂ ಒಂದನ್ನೊಂದು ಒತ್ತಿಕೊಂಡು ಬರಲು, "ಈತನಾರೋ ನಾನರಿಯೆ. ಇವನನ್ನು ಗಂಡನೆಂದು ತೋರಿಸುವಿರಾ? ಮಹಾರಾಜರನ್ನು ಕೇಳಿ ನಿಜವನ್ನು ತಿಳಿಯದೆ ಬಿಡಲಾರೆ" ಎಂದಳು. ರೂಪವತಿ ಜೋರಿನ ಹುಡುಗಿಯಾಗಿರುವುದನ್ನು ನೋಡಿ, ಹೆಚ್ಚಿನ ಬಲವಂತಕ್ಕೆ ಹೋದರೆ ಅವಳು ರಾಜನವರೆಗೂ, ತಲಪಿಸಬಲ್ಲಳೆಂದು ಮುದುಕನು ಹೆದರಿದನು.

"ನಿನ್ನ ಬುದ್ಧಿ ಸರಿಯಾಗುವವರೆಗೆ ನೀನು ನಿನ್ನ ತೌರಿನಲ್ಲೇ ಇರು. ಆ ಮೇಲೆ ನೋಡುವ" ಎಂದು ಅವಳನ್ನು ತೌರುಮನೆಯ ಹತ್ತಿರ ಬಿಟ್ಟುಬರುವಂತೆ ತನ್ನ ಆಳುಗಳಿಗೆ ಹೇಳಿ ಕಳುಹಿಸಿದನು. ಆ ಮೇಲೆ ಅವಳ ಗೊಡವೆಯನ್ನೇ ಹಚ್ಚಿಕೊಳ್ಳದೆ ಸುಮ್ಮನೆ ಹೋಗಿಬಿಟ್ಟನು.

ರೂಪವತಿ ತೌರು ಮನೆಯನ್ನು ಸೇರಿದರೂ ಸಂತೋಷಪಡಲಾರದೆ ಹೋದಳು. ಅವಳು ಹೇಳಿದ ಸಮಾಚಾರ ಕೇಳಿ ಮನೆಯವರೆಲ್ಲಾ ಆಂದೋಳನೆಗೊಂಡರು. ಅಸಲು ತನ್ನ ಗಂಡ ಬದುಕಿರುವನೋ ಇಲ್ಲವೋ ಎಂಬ ಸಂದೇಹವು ರೂಪವತಿಯನ್ನು ಪೀಡಿಸುತ್ತಿತ್ತು. ಕುರೂಪಿಯನ್ನು ಗಂಡನೆಂದು ತೋರಿಸಿದ ಆ ದುಷ್ಟರು ತನ್ನ ಗಂಡನಿಗೇನೋ ಕೇಡು ಬಗೆದಿರಬೇಕೆಂದು ಅವಳಿಗೆ ತೋರಿತು.

ಈ ಆಂದೋಳನೆ ಹೆಚ್ಚು ಹೊತ್ತು ನಿಲ್ಲಲಿಲ್ಲ. ರೂಪವತಿಗೆ ನಡೆದ ಅನ್ಯಾಯವನ್ನು ಕುರಿತು ಅವಳ ತಂದೆಯಾದ ರತ್ನದತ್ತನೊಂದಿಗೆ ಹೇಳಿ, ಇಂತಹ ಘೋರ ಅನ್ಯಾಯದಲ್ಲಿ ತಾನು ಕೂಡಾ ಭಾಗ ವಹಿಸಿದುದಕ್ಕೆ ಅವರು ಕೊಡುವ ಶಿಕ್ಷೆಯನ್ನು ಅನುಭವಿಸೋಣವೆಂದುಕೊಂಡು, ಕೇಸಟನು ಅಲ್ಲಿಗೇ ನಡೆದು ಬಂದನು.

ಕೇಸಟನನ್ನು ನೋಡಿದ ಕೂಡಲೇ ರೂಪವತಿಗಾದ ಸಂತೋಷಕ್ಕೂ ಆಶ್ಚರ್ಯಕ್ಕೂ ಮೇರೆಯೇ ಇಲ್ಲ. ಅಲ್ಲಿದ್ದ ಎಲ್ಲರಿಗೂ ಅಷ್ಟೇ. ರೂಪವತಿ ಅಲ್ಲಿಯೇ ಇರುವುದನ್ನು ನೋಡಿ ಕೇಸಟನು ಕೂಡಾ ಸ್ವಲ್ಪ ಹೊತ್ತು ಆಶ್ಚರ್ಯದಿಂದ ಮೂಕನೇ ಆದನು. ಆ ಮೇಲೇನು? ಅಳಿಯನಿಗೆ ನಡೆಯಬೇಕಾದ ಸಕಲ ಮರ್ಯಾದೆಗಳೂ ಅವನಿಗೆ ನಡೆದುವು.

ಕೇಸಟನು ಕೆಲವು ದಿನ ರೂಪವತಿಯೊಂದಿಗೆ ಅಲ್ಲಿಯೇ ಚೆನ್ನಾಗಿದ್ದು, ಆ ಮೇಲೆ ರೂಪವತಿಯನ್ನು ತನ್ನೊಂದಿಗೆ ಕರೆದುಕೊಂಡು ಪಾಟಲೀಪುತ್ರಕ್ಕೆ ಹೋಗಿ ಸೇರಿದನು. ಆ ದಂಪತಿಗಳು ಚಿರಕಾಲ ಸುಖವಾಗಿದ್ದರು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೦ ಜುಲೈ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ







A. K. Chatterjee — S. Paramasivan

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಮೇ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಮಾರ್ಚಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: **ಕೈಗೊಂದು ಕಸುಬಿದ್ದರೆ**

ಎರಡನೇ ಫೋಟೋ : **ಕೈಗೂಡುವುದು ಸಂಪಾದನೆ**

ಕಳುಹಿಸಿದವರು: ಜಿ. ಆರ್. ಕೆಂಚಪ್ಪ,

ಆರ್. ನುಲೆನೂರು, ಹೊಳಲ್ಕೆರೆ, ಚಿತ್ರದುರ್ಗ ತಾಲೂಕು.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.


ಚಂದಮಾಮ
1980 ಜೂನ್
ಸಂಚಿಕೆಯಿಂದ
ಧೂಮಕೇತು
ಎರಡು ದಶಕಗಳ ಹಿಂದೆ
ವಾಚಕಲೋಕವನ್ನು ತುಂಬಾ
ಆಕರ್ಷಿಸಿದ ಅದ್ಭುತ ಸಾಹಸಗಳ ಕಥೆ!
ಪ್ರತಿ ತಿಂಗಳೂ ಓದಿರಿ
ನಿಮ್ಮ ಪ್ರತಿಗೆ ಏಜೆಂಟರನ್ನು ಕೇಳಿರಿ
CHITRA

## ಮುಖ್ಯವಾಗಿ ಗಮನಿಸಿರಿ

**'ಚಂದಮಾಮ' ಪತ್ರಿಕೆಗೆ ಸಂಬಂಧಪಟ್ಟ ಚಂದಾ, ಏಜನ್ಸೀ ಡಿಪಾಜಿಟ್ಸ್, ಇಂಡೆಂಟು ಮೊಬಲಗು, ಪ್ರಕಟನೆಯ ಚಾರ್ಜು ಮೊದಲಾದುವುಗಳನ್ನೆಲ್ಲಾ ಕೆಳಗಿನ ವಿಳಾಸಕ್ಕೇ ಕಳುಹಿಸಿರಿ.**

*

## ಡಾಲ್ಟನ್ ಏಜನ್ಸೀಸ್

**ಚಂದಮಾಮ ಬಿಲ್ಡಿಂಗ್ಸ್**

**ವಡಪಳನಿ, ಮದರಾಸು–೬೦೦ ೦೨೬**

చందమామ அம்புலி மாமா





Chandamama is published in TWELVE INDIAN Languages including English: educating and entertaining millions of readers. Our SINHALA Language edition is now dedicated to delight the children of SRILANKA

***CHANDAMAMA***

***the magazine for children makes the young and old WISE.***

CHANDAMAMA PUBLICATION

চাঁদমামা ***CHANDAMAMA*** चांदोबा

